

# ಸಿದ್ಧಗಂಗಾ



ಸಂಪುಟ : ೩೯ ಸೆಪ್ಟೆಂಬರ್ ೨೦೦೩ ಸಂಚಿಕೆ : ೯

## ದೆಹಲಿಯಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು



ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ಸಮಾಧಿ ಸ್ಥಳ ರಾಜ್‌ಘಾಟ್‌ನಲ್ಲಿ ಪೂಜ್ಯ ಶ್ರೀ ಶ್ರೀಗಳವರು



ಚತ್ತೀಸ್‌ಪುರ ದೇವಾಲಯಕ್ಕೆ ಭೇಟಿ



ಐತಿಹಾಸಿಕ ಕೆಂಪುಕೋಟೆಯಲ್ಲಿ ಪೂಜ್ಯ ಶ್ರೀಶ್ರೀಗಳವರು



ಲೋಟಸ್ ಮಹಲ್ ಮುಂದೆ ಶ್ರೀ ಶ್ರೀಗಳು



ಮುಖಪುಟ
ಕಳೆದ ತಿಂಗಳು ದೆಹಲಿಯಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ವಿವಿಧ ಸ್ಥಳಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ತೆಗೆದ ಛಾಯಾಚಿತ್ರಗಳು


ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕರು
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೩೬೦೪೦೮೭


ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೩೯  ಸೆಪ್ಟೆಂಬರ್ ೨೦೦೩  ಸಂಚಿಕೆ : ೯


## ಒಳಪುಟಗಳಲ್ಲಿ..........




ವಿಳಾಸ :
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/– |
| ಆಜೀವ ಸದಸ್ಯತ್ವ | ರೂ. ೬೦೦/– |
| ಬಿಡಿ ಪ್ರತಿ | ರೂ. ೧೫.೦೦ |



## ರೈತರ ಆತ್ಮಹತ್ಯೆ ....

ಇತ್ತೀಚಿನ ದಿನಗಳು ಸಾವಿನ ಸುದ್ದಿಯನ್ನೇ ತರುತ್ತಿರುವ ದುರ್ದಿನಗಳಾಗಿವೆ. ದಿನ ಬೆಳಗೆದ್ದು ಯಾವ ಪತ್ರಿಕೆಯ ನೋಡಲಿ ಆತ್ಮಹತ್ಯೆಯ ಅದರಲ್ಲೂ ರೈತರ ಆತ್ಮಹತ್ಯೆಯ ಸಚಿತ್ರ ಸುದ್ದಿಗಳೇ. ದೂರದರ್ಶನದ ವಾರ್ತೆಗಳಂತೂ ಅದನ್ನೇ ಬಿತ್ತರಿಸುತ್ತಿವೆ. ರೈತರ ಆತ್ಮಹತ್ಯೆಗೆ ಕಾರಣ ಸಾಲ. ಸಾಲದ ಬಾಧೆ ತಾಳದೆ ನೇಣಿಗೆ, ವಿಷಸೇವನೆಗೆ ಶರಣಾಗುತ್ತಿರುವ ರೈತಬಂಧು. ಸರ್ಕಾರ ರೈತರ ಹಿತರಕ್ಷಣೆಯಲ್ಲಿ ವಿಫಲವಾಗುತ್ತಿದೆ ಎಂಬ ಆರೋಪ. ಆಡಳಿತ ಪಕ್ಷದತ್ತ ಬೆರಳು ಮಾಡುವ ವಿರೋಧಪಕ್ಷಗಳ ಪ್ರದರ್ಶನ. ಈ ಸಮಸ್ಯೆಗೆ ನೂರುಮುಖಗಳೆನ್ನಲೆ? ಸಾವಿರ ಮುಖಗಳೆನ್ನಲೆ? ಆತ್ಮಹತ್ಯೆ ಮಹಾಪಾಪ ಎಂಬ ಮಾತು. ಅಲ್ಲೊಬ್ಬರು, ಇಲ್ಲೊಬ್ಬರು ಧರ್ಮಪುರುಷರು, ಮಠಾಧಿಪತಿಗಳು ಆತ್ಮಹತ್ಯೆಮಾಡಿಕೊಳ್ಳಬೇಡಿ ಎಂಬ ಸಮಾಧಾನದ ಮಾತನ್ನಾಡಿದ್ದಾರೆ. ಸಾಲದಶೂಲ ಪ್ರಕೃತಿಯ ವಿಕೋಪದಿಂದಾಗಿ ಉಲ್ಬಣಿಸಿ ಸಾಲುಸಾಲಾಗಿ ರೈತರು ಸಾಯುತ್ತಿದ್ದಾರೆ. ಅಸಹಾಯಕನಾಗಿ, ಸಾಲದ ಶೂಲಕ್ಕೆ ಕೊರಳೊಡ್ಡುತ್ತಿರುವ ರೈತನೊಬ್ಬನ ಸಹಾಯಕ್ಕೆ ಲೋಕಸ್ಪಂದಿಸುವಲ್ಲಿ ಸೋಲುತ್ತಿದೆಯೇ? ಮಾನವೀಯತೆ ಬತ್ತುತ್ತಿದೆಯೇ? ಊರಿನಲ್ಲಿ ಹೃದಯವಂತರಿಲ್ಲವಾಗುತ್ತಿದ್ದಾರೆಯೇ? ಪ್ರಾಜ್ಞರು ಮೌನವ್ರತಧಾರಿಗಳಾದರೆ? ಬುದ್ಧಿಜೀವಿಗಳು, ಸಂಘ, ಸಂಸ್ಥೆಗಳು, ಬಂಧುಬಳಗ, ಕಳ್ಳುಬಳ್ಳಿ ಯವರು ನಿಷ್ಕ್ರಿಯರಾದರೆ? 'ಅಯ್ಯೋ ಹೀಗಾಗಬಾರದಿತ್ತು'? 'ಸರ್ಕಾರ ಮುಂದೆ ಬರಬೇಕೀಗ? ಎಂಬ ಮಾತನಾಡುವುದಷ್ಟಕ್ಕೇ ಕರ್ತವ್ಯ ಮುಗಿದಂತಾಯಿತೆ? ಸಕ್ರಿಯಾತ್ಮಕ ಸಹಕಾರ ಎಲ್ಲದರಲ್ಲವೆ? ಕರ್ನಾಟಕದ ಐದುಕೋಟಿ ಜನ ತಲೆಗೊಂದೊಂದು ರೂಪಾಯಿ ಕೊಟ್ಟರೆ ಐದು ಕೋಟಿ ರೂಪಾಯಿಗಳು ಆತ್ಮಹತ್ಯೆ ದುಃಖಕ್ಕೆ ಒಳಗಾದ ಕುಟುಂಬವರ್ಗದವರಿಗಿಷ್ಟು ಚೈತನ್ಯ ನೀಡಿದಂತಾದೀತಲ್ಲವೆ? ಎಲ್ಲವನ್ನೂ ಸರ್ಕಾರಕ್ಕೆ ಬಿಡುವುದೆ? ನಮ್ಮ ಪಾಲಿಲ್ಲವೆ? 'ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ ಧರೆ ಹತ್ತಿ ಉರಿದಡೆ ನಿಲಬಹುದೆ?' ದೇಶಕ್ಕೆ ಅನ್ನಕೊಡುವ ರೈತ ಸಾಯುತ್ತಿರುವಾಗ ನಿಲ್ಲುವುದಾದರೂ ಹೇಗೆ? ರೈತ ಬಂಧುಗಳೂ ಧೈರ್ಯಗೆಡಬಾರದಲ್ಲವೆ? ಬದುಕಿ ಎದುರಿಸುವಲ್ಲಿ ಹಿಂಜರಿಯಬಾರದೀಗ. ಸಾವೊಂದೇ ಎಲ್ಲದಕ್ಕೂ ಪರಿಹಾರವಲ್ಲ.

– ಸಂಪಾದಕ







## ಕಾಲದ ಬೆಲೆ

ನಿಮಗೆ, ವಿದ್ಯಾರ್ಥಿಗಳಿಗೆ ಕಾಲದ ಬೆಲೆ ಗೊತ್ತಿಲ್ಲ. ನಿಮಿಷ ನಿಮಿಷಾರ್ಧಕ್ಕೂ ಬೆಲೆ ಇದೆ. ಕಾಲದ ಬೆಲೆಯನ್ನು ತಿಳಿದವನು ಜ್ಞಾನಿಯಾಗುತ್ತಾನೆ. ಕಾಲ ಯಾರನ್ನೂ ಕಾಯುವುದಿಲ್ಲ. ಅದು ಯಾರ ಅಧೀನಕ್ಕೂ ಒಳಪಟ್ಟಿಲ್ಲ. ಎಲ್ಲರೂ ಕಾಲಕ್ಕೆ ಅಧೀನರು. ಕಾಲ ಸಾರ್ವಭೌಮ ನಿರಂಕುಶಾಧಿಕಾರಿ. ರಾಜ್ಯಗಳಳಿಯಲಿ ರಾಜ್ಯಗಳುದಿಸಲಿ ಕಾಲ ಎಂದೂ ನಿಲ್ಲುವುದಿಲ್ಲ. ಎಲ್ಲರೂ, ಎಲ್ಲವೂ ಕಾಲವಶರು, ಕಾಲವನ್ನು ವ್ಯರ್ಥವಾಗಿ ಕಳೆಯುವುದೆಂದರೆ ಸಾವನ್ನು ಸ್ವಾಗತಿಸಿದಂತೆಯೇ. ಕಾಲವೆಂಬುದು ಇತಿಹಾಸವನ್ನು ನಿರ್ಮಿಸುವಂಥದು. ಕಾಲವನ್ನು ಅರ್ಥಮಾಡಿಕೊಂಡವರು, ಕಾಲದ ಬೆಲೆಯನ್ನರಿತವರು ಜ್ಞಾನಿಗಳಾಗಿದ್ದಾರೆ. ''ಮುತ್ತು ಕಳೆದರೆ ಸಿಕ್ಕೀತು ಹೊತ್ತು ಕಳೆದರೆ ಸಿಕ್ಕೀತೆ?'' ಎನ್ನುತ್ತದೆ ಅನುಭವ ವಾಣಿ. ವಿದ್ಯಾರ್ಥಿಗಳಾದ ನೀವು ಶ್ರೀಮಠಕ್ಕೆ ನೂರಾರು ಮೈಲಿಗಳ ದೂರದಿಂದ ಬಂದಿದ್ದೀರಿ. ತಂದೆ ತಾಯಿಗಳನ್ನು ಬಿಟ್ಟು ಬಂದಿದ್ದೀರಿ. ವಿದ್ಯಾಭ್ಯಾಸಕ್ಕೆಂದು ಬಂದಿದ್ದೀರಿ. ಶ್ರೀಮಠದಲ್ಲಿ ಆಶ್ರಯ ಪಡೆದುಕೊಂಡಿದ್ದೀರಿ. ಬಡತನದ ಕುಟುಂಬಗಳಿಂದ ಬಂದವರಿದ್ದೀರಿ, ಮಧ್ಯಮವರ್ಗದ ಕುಟುಂಬಗಳಿಂದಲೂ ಬಂದವರಿದ್ದೀರಿ. ಸಂಸ್ಥೆಯಲ್ಲಿ ಸಮಭಾವ, ಸಮಾನತಾ ಬಾಳುವೆ ಮಾಡುತ್ತಿದ್ದೀರಿ. ನಿಮಗೆ ಪ್ರಸಾದದ (ಊಟದ) ತೊಂದರೆಯಿಲ್ಲ. ವಸತಿಯ ತೊಂದರೆಯಿಲ್ಲ. ಪಾಠಪ್ರವಚನಗಳ ತೊಂದರೆಯಿಲ್ಲ. ಎಲ್ಲ ವ್ಯವಸ್ಥೆಯಿದೆ. ಎಲ್ಲ ಸೌಲಭ್ಯವಿದೆ. ಸಂಸ್ಕೃತ ಕಲಿಯುವ ಅವಕಾಶವಿದೆ. ಸಂಗೀತ ಕಲಿಯುವ ಅನುಕೂಲವಿದೆ. ವೃತ್ತಿ ವಿದ್ಯೆ ಕಲಿಯಲು ಅವಕಾಶವಿದೆ. ನಿಮ್ಮಲ್ಲಿರುವ ಪ್ರತಿಭೆಗಳನ್ನು ಸದುಪಯೋಗ ಮಾಡಿಕೊಳ್ಳುವ ಅನುಕೂಲಗಳಿಲ್ಲಿವೆ. ನಗರ ಜೀವನದ ಗಜಿಬಿಜಿಯಿಲ್ಲ. ವಾಹನಗಳ ಶಬ್ದಮಾಲಿನ್ಯವಿಲ್ಲ. ಪ್ರಕೃತಿಯ ಪ್ರಶಾಂತ ಪರಿಸರವಿದೆ. ಪ್ರತಿಭಾವಂತ ಶಿಕ್ಷಕರಿದ್ದಾರೆ. ಇಷ್ಟೆಲ್ಲ ಇರುವಾಗ ನಿಮ್ಮ ಕಾಲವನ್ನು ನೀವು ಸದುಪಯೋಗಮಾಡಿಕೊಳ್ಳಬೇಕು. ವೃಥಾ ಕಾಲಹರಣ ಮಾಡುವುದರಿಂದ ಮುಂದಿನ ಜೀವನವನ್ನು ದುಃಖಕರವನ್ನಾಗಿಸಿಕೊಳ್ಳುತ್ತೀರಿ. ಕಾಲಹರಣದಿಂದ ಅಥವಾ ಕಾಲದ ಅಪವ್ಯಯದಿಂದ ದ್ರೋಹಮಾಡಿಕೊಳ್ಳುತ್ತೀರಿ. ದ್ರೋಹ ನಿಮಗೆ ಮಾತ್ರವಲ್ಲ, ನಿಮ್ಮ ತಂದೆ ತಾಯಿಗಳಿಗೆ, ನಿಮಗೆ ಆಶ್ರಯಕೊಟ್ಟ ಶ್ರೀಮಠಕ್ಕೆ, ಅಷ್ಟೇಕೆ ರಾಷ್ಟ್ರಕ್ಕೆ, ಮನುಷ್ಯ ಜನ್ಮವನ್ನು ಅನುಗ್ರಹಿಸಿದ ದೇವರಿಗೆ, ನೀವು ಬದುಕಿರುವ ಈ ಕಾಲದೇಶಾದಿಗಳಿಗೆ ದ್ರೋಹಮಾಡಿದಂತಾಗುತ್ತದೆ. ಕಾಲಕ್ಕಿಂತ ದೊಡ್ಡ ಶಕ್ತಿಯಿಲ್ಲ, ಐಶ್ವರ್ಯವಿಲ್ಲ, ಧರ್ಮವಿಲ್ಲ, ದೇವರಿಲ್ಲ. ಕಾಲವರಿತು ನಡೆಯಿರಿ. ❄

ॐ



# ಶ್ರೀ ಸಿದ್ಧಲಿಂಗೇಶ್ವರ ವಚನ

*ಮೊಸಳೆಯ ಹಿಡಿದ ಮಣ್ಣಮಂಡಲದ ವಿಷಹತ್ತಿ*
*ಜಗವೆಲ್ಲಾ ಮಸುಳಿಸಿ ಮರೆದೊರೆಗಿದ್ದ ಕಂಡೆನಯ್ಯಾ*
*ವಿಷದ ಹೊಗೆಯನು ಕೆಡಿಸಿ ಮೊಸಳೆಯ ಬಿಡಿಸಿಕೊಂಬ*
*ಅಸಮರನಾರನೂ ಕಾಣೆನಯ್ಯ*
*ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ !*

**ಮಾ**ಯೆಯೆಂಬ ಮೊಸಳೆಯನು ಸುತ್ತಿರುವ ವಿಷಯುಕ್ತನಾಗಿರುವ ಮನವೆಂಬ ಉರುಗನ ಪ್ರಪಂಚವೆಂಬ ವಿಷವು ಮೂರು ಲೋಕದವರೆಲ್ಲರನ್ನು ಆವರಿಸಿರಲು, ಪ್ರಪಂಚವೆಂಬುದರಲ್ಲಿ ಮಗ್ನವಾಗಿ ಹುಟ್ಟುಸಾವುಗಳಿಗಾಗಿದ್ದಾರೆ ಅಂತಹ ಮನದಲ್ಲಿ ಪ್ರಪಂಚಿನ ಜ್ಞಾನವನ್ನು ಸುಜ್ಞಾನದಿಂದ ಕಳೆದುಕೊಂಡು, ಮಾಯೆ ಅಳಿದು, ಶುದ್ಧವಿದ್ಯಾಸ್ವರೂಪವನ್ನು ಪಡೆದು ಲಿಂಗದಲ್ಲಿ ಏಕವಾಗಿ ತಾನು ಬೇರೆ-ಲಿಂಗ ಬೇರೆ ಎಂಬ ಭೇದಭಾವವಳಿದು ಹೊಳೆಯುತ್ತಿರುವವರನ್ನು ಅಂದರೆ ಶರಣರನ್ನು ಕಾಣುವುದು ಅಪೂರ್ವವೆನ್ನುತ್ತಾರೆ ಸಿದ್ಧಲಿಂಗೇಶ್ವರರು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀವಾಣಿ

ಯಾವಾಗ ಮಾನವನು ಪರಿಪೂರ್ಣನಾಗಿ ಮಾನವತೆಯನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡು, ಮಾನವನಿಗೆ ಪರಿಪೂರ್ಣವಾದ ಮಾರ್ಗವನ್ನು ತೋರಿ, ತನ್ನ ಪರಿಪೂರ್ಣ ಬೋಧನೆಯಿಂದ ಜನರನ್ನು ಪೂರ್ಣರನ್ನಾಗಿ ಮಾಡುತ್ತಾನೆಯೊ ಆಗ ಮಾತ್ರ ಜನತೆಯಲ್ಲಿ ಸುಖಶಾಂತಿಗಳು ನೆಲಸಲು ಸಾಧ್ಯ. ಜನರೂ ಪರಿಪೂರ್ಣವಾಗಿ ಬಾಳುವ ಶಕ್ತಿ ಸಂಪಾದನೆಯನ್ನು ಮಾಡಿಕೊಂಡಾಗ ಮಾತ್ರ ನೆಮ್ಮದಿಯ ಬಾಳು ಲಭ್ಯವಾಗುವುದು.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ನೆನೆ ನೆನೆದು ಸುಖಿಯಾದೆ ನೋಡಿ ಧನ್ಯನಾದೆ
ಪಾದಮುಟ್ಟಿ ಪಾಪ ಕಳೆಕೊಂಡೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಧೀರ ಗುರುವೆ ದಾರಿದೀಪವಾದೆ
ಮಾನವಂತನಾಗಿ ಬಾಳೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಂಸಾರವೆಂಬೂದು ಸಾಗರ ಏಳೆಂದೆ
ಸಂಸಾರ ಶಿವಯೋಗ ಮಾಡೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವಿಶ್ವಸಂಸಾರಿಯೆ ವಿಶ್ವವಿಚಾರಿಯೆ
ವಿಶ್ವಾಸದ ವಿನಯ ವಾರಿಧಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾನಾವರ್ಣದ ಬಾಳು ಕಮನೀಯ ಕನ್ನಡಿ
ನಾನು ಕಳೆಯದಂತೆ ಕಾಪಾಡು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನನ್ನ ಕಾಲೇ ನನಗೆ ತೊಡರಾಗಿ ತಡೆಯುತ್ತಿದೆ
ನನ್ನ ಮನಮರುಳಾಗಿ ಕೆಡುತಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜೀವಪಶುಗಳ ಹರಸಿ ದೇವಶಿವನಾಗಿರುವೆ
ಭಾವಭಕುತರ ಮನದೊಳಡಿಗಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಣ್ಣ ಕತ್ತಲೆ ಕಳೆದು ಬೆಳಕ ನೀಡುವ ರವಿಯೆ
ಎಣ್ಣೆ ಬತ್ತಿಯಾಗಿ ಉರಿಯುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವಸೂತಕ ಕಳೆವ ಭವರೋಗ ವೈದ್ಯನೆ
ಭವದ ಬವಣೆಯ ಕಳೆವ ಭಾಗ್ಯವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹರನ ನಿರೂಪವ ಶಿರದ ಮೇಲಿಟ್ಟು ನಡೆವ
ದಾಸೋಹ ಧೀಮಂತ ಶ್ರೀ ವಿಭುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ವಾಸ್ತು

– ಶ್ರೀ ಸಿದ್ಧೇಶ್ವರ ಸ್ವಾಮಿಗಳು
ಜ್ಞಾನಯೋಗಾಶ್ರಮ, ವಿಜಾಪುರ

**ಇಂ**ದು ಮನೆ ಕಟ್ಟುವವರನ್ನು ಒಂದು ಪ್ರಶ್ನೆ ಕಾಡುತ್ತದೆ. ಮನೆಯನ್ನು ವಾಸ್ತುಶಿಲ್ಪದಂತೆ ಕಟ್ಟಿಸುವುದೆ? ಕಟ್ಟದಿದ್ದರೆ ಏನಾದರೂ ತೊಂದರೆ ಆಗುವುದೆ? ಹೇಗೆ ಕಟ್ಟುವುದು? ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಲುಕುತ್ತಾರೆ.

**ಮ**ನೆ ಹೇಗಾದರೂ ಇರಲಿ ಕಲ್ಲುಮಣ್ಣು ಇಟ್ಟಿಗೆಗಳನ್ನು ಉಪಯೋಗಿಸಿದರೂ ಅದನ್ನು ಕಟ್ಟಬೇಕಾದದ್ದು ಮನಸ್ಸಿನಿಂದ. ಮನೆಗೆ ಸೌಂದರ್ಯ ತರುವುದು ಬಣ್ಣದಿಂದಲ್ಲ. ಮನದ ಭಾವನೆಗಳಿಂದ. ಸುಂದರವಾದ ಭಾವನೆ ಹೊಂದಿದಾತ ಅದ್ಭುತವಾದ ಮನೆಯನ್ನು ಕಟ್ಟಬಲ್ಲ. ಭಾವನೆಗಳು ಕುರೂಪವಾಗಿದ್ದರೆ ಮನೆಯೂ ಕುರೂಪವಾಗಿರುತ್ತದೆ. ಆದರಿಂದ ಮನದ ಭಾವನೆ ಸುಂದರವಾಗಿರಬೇಕು.



ಒಂದು ಊರು. ಅಲ್ಲಿ ಒಬ್ಬತಾಯಿ ಗುಡಿಸಲು ಕಟ್ಟಿಕೊಂಡು ಮಗನೊಡನೆ ವಾಸವಾಗಿದ್ದಳು. ಬಡತನವಿದ್ದರೂ ಮನೆ ಒಳಗೆ ವಾತ್ಸಲ್ಯದ ಸಿರಿಸೂಸುತ್ತಿತ್ತು. ತಿನ್ನಲು ಹೊಟ್ಟೆ ತುಂಬ ಅನ್ನವಿಲ್ಲ. ಉಡಲು ಇನ್ನೊಂದು ಬಟ್ಟೆಯಿಲ್ಲ. ಆದರೆ ಅವರಲ್ಲಿ ಶ್ರೀಮಂತ ಮನ ತುಂಬಿ ತುಳುಕಾಡುತ್ತಿತ್ತು. ಹುಡುಗ ಸಂತಸದಿಂದ ಹಾಡುತ್ತಿದ್ದ ಕುಣಿಯುತ್ತಿದ್ದ.

**ಒಂ**ದು ದಿನ ಒಂದು ಘಟನೆ ನಡೀತು. ಹುಡುಗ ಹಾದಿಯಿಂದ ಬರುತ್ತಿದ್ದಾಗ ಬದಿಯಲ್ಲಿ ಒಂದು ಬಂಗಾರದ ಉಂಗುರ ಸಿಕ್ತು. ಕೈಗೆ ತೆಗೆದುಕೊಂಡ. ನಾನು ಇದನ್ನು ಒಯ್ದರೆ ಇದನ್ನು ಕಳೆದುಕೊಂಡವರಿಗೆ ನೋವಾದೀತು ಎಂದುಕೊಂಡ. ಬಡವರಾದ ನಾವು ಅವರನ್ನು ಹೇಗೆ ಹುಡುಕುವುದು? ಈ ಊರಿನ ಯಾರಾದರು ಶ್ರೀಮಂತನಿಗೆ ಕೊಟ್ಟರೆ ಆತನಿಗೆ ಎಲ್ಲರ ಪರಿಚಯವಿರುತ್ತದೆ. ಅದನ್ನು ತಲುಪಿಸುತ್ತಾನೆ ಎಂದುಕೊಂಡು ಊರಿನ ಸಿರಿವಂತನ ಮನೆಗೆ ಬಂದ. ಸಿರಿವಂತ ೮೦ ವರ್ಷದ ಮುದುಕ ಆತನಿಗೆ ಊರಲ್ಲಿ ಘನತೆ ಗೌರವ ಇತ್ತು. ಅದನ್ನು ಶ್ರೀಮಂತನಿಗೆ ಕೊಟ್ಟ. ಆಗ ಮುದುಕ ಕೇಳಿದ.

''ಎಲ್ಲಿ ಸಿಕ್ಕಿತು ನಿನಗೆ? ನನ್ನಲ್ಲಿಗೆ ಏಕೆ ತಂದೆ? ಎಂದ. ಆಗ ಆ ಹುಡುಗ ನನಗೆ ಇಂತಲ್ಲಿ ಸಿಕ್ಕಿತು. ನೀವು ಸಿರಿವಂತರು ನೀವಾದರು ಕಳೆದುಕೊಂಡವರಿಗೆ ತಲುಪಿಸಿ ಎಂದು ಹೇಳಿ ಹೊರಟ. ಹುಡುಗನಿಗೆ ಸಂತಸವಾಗಿತ್ತು. ವಿಷಯ ತಿಳಿದು ತಾಯಿಗೂ ಸಂತಸವಾಗಿತ್ತು. ಈ ಗುಣಕ್ಕೆ ಕಾರಣ ಆಕೆ ತನ್ನ ಮಗನ ಮನದಲ್ಲಿ ಕಟ್ಟಿದ ಮನೆ, ಆಕೆ ಯಾವ ವಾಸ್ತುಶಾಸ್ತ್ರ ನೋಡಿರಲಿಲ್ಲ ಹೃದಯದಶಾಸ್ತ್ರ ಆಕೆಗೆ ಗೊತ್ತಿತ್ತು. ಪ್ರೇಮಸುರಿಸಿ ಮನೆಕಟ್ಟಿದ್ದಳು.

**ನ**ಮ್ಮ ಮನೆ ದೊಡ್ಡದಿದೆ ಆದರೆ ಮನಸ್ಸು? ಎಲ್ಲ ಶಾಸ್ತ್ರ ನೋಡಿ ದೊಡ್ಡ ಮನೆ ಕಟ್ಟುತ್ತೇವೆ. ಆದರೆ ಅಲ್ಲಿ ಮನಸ್ಸು ಕಟ್ಟಲಿಕ್ಕೆ ಆಗುವುದಿಲ್ಲ. ತಾಯಿ ಮನಸ್ಸು ಕಟ್ಟಿದ್ಳು. ಇತ್ತ ಮುದುಕ ಉಂಗುರ ನೋಡಿ ಪೆಟ್ಟಿಗೆಯೊಳಗಿಟ್ಟು ಬೀಗ ಹಾಕಿದ : ಹುಡುಗ ದಿನಾ ಪಂಚಾಯತಿ ಕಛೇರಿಗೆ ಹೋಗಿ ಬೋರ್ಡ್ ನೋಡಿ ಬರುತ್ತಿದ್ದ. ಅಲ್ಲಿ ಕಳೆದುಕೊಂಡವರ ಹೆಸರನ್ನು ಹಾಕಿರಲಿಲ್ಲ. ಮಗ ತಾಯಿಯನ್ನು ಕೇಳಿದ ''ಅಮ್ಮಾ ದಿನಾ ನಾನು ಪಂಚಾಯಿತಿಗೆ ಹೋಗಿ ನೋಡ್ತಿದ್ದೀನೆ. ಯಾರದ್ದೆಂದು ತಿಳಿಯಲೇ ಇಲ್ಲ'' ಎಂದ.

**ತಾ**ಯಿ ಹೇಳಿದಳು ''ಮಗು ನಿನಗ್ಯಾಕೆ ಯೋಚನೆ. ನೀನು ಆ ಮುದುಕನಿಗೆ ಕೊಟ್ಟ ಮೇಲೆ ಇನ್ನೊಬ್ಬರ ಗೋಜಿಗೆ

ಹೋಗಬಾರದು. ನಮ್ಮ ಆನಂದದಲ್ಲಿ ನಾವಿರಬೇಕು'' ಎಂದಳು. ಎಂಥ ಭಾವ. ಒಂದು ಗುಡಿಸಲಿನ ಮನೆ; ಇನ್ನೊಂದು ಮಹಡಿ ಮನೆ ಆಸೆ. ಸಂಪತ್ತು ತುಂಬಿದೆ ಇಲ್ಲಿ, ಗುಡಿಸಲಲ್ಲಿ ಪ್ರೇಮದ ಸಂಪತ್ತು ತುಂಬಿದೆ. ಎಂಥ ವಾಸ್ತುಶಾಸ್ತ್ರ ರಚಿಸಿ ಬಿಡಿಸಿದ್ದಾಳೆ ಆ ತಾಯಿ.

ನಾವು ಮನೆ ಕಟ್ಟುತ್ತೇವೆ. ನೋಡಲು ಬಂದವರು ಹೇಳುತ್ತಾರೆ. ಕಿಟಕಿ, ಬಾಗಿಲು ಸರಿಯಿಲ್ಲ ಎನ್ನುತ್ತಾರೆ. ಅದನ್ನು ಕೇಳಿದ ನಾವು ಹೇಳುತ್ತೇವೆ ''ನಾವು ನಮ್ಮಷ್ಟಕ್ಕೆ ಇದ್ದೇವೆ. ನಮ್ಮಲ್ಲಿ ಹೋಗುವವರು ಬರುವವರು ನೀವು. ನೀವು ಕಟ್ಟಿರೆ ಮನೆ ಕಟ್ಟಿದ್ದು ಎನ್ನುತ್ತಾರೆ. ನಾವು ಹೇಳುತ್ತೇವೆ ಮನೆ ಕಟ್ಟಿದಾತ ಶಾಂತಿ ಮಾಡುವುದಕ್ಕೆ ಮುನ್ನ; ನಿಮ್ಮ ಪ್ರವೇಶಕ್ಕೆ ಮುನ್ನ ನಾವೆಲ್ಲ ಎಷ್ಟು ಶಾಂತಿಯಿಂದ ಇದ್ದೆವು. ನೀವು ಒಳಗೆ ಪ್ರವೇಶಿಸಿದಿರಿ. ನಮ್ಮ ಶಾಂತಿ ಹೋಯ್ತು. ಆದರಿಂದ ಶಾಂತಿಯಿಂದ ಇರುವುದನ್ನು ಕಲಿಯಿರಿ. ಈ ಜಗತ್ತಿನಲ್ಲಿ ನಾವು ಹೇಗಿದ್ದರೇನು? ಪೂರ್ವಕ್ಕಿದ್ದರೇನು? ಉತ್ತರಕ್ಕಿದ್ದರೇನು? ಪಶ್ಚಿಮಕ್ಕಿದ್ದರೇನು? ದಕ್ಷಿಣಕ್ಕಿದ್ದರೇನು. ನೀವು ಸಂತಸವಾಗಿದ್ದರೆ ಮನೆ ಸೊಗಸೆನಿಸುತ್ತದೆ.

ಸುಂದರ ಮನೆಯ ಐದು ಲಕ್ಷಣಗಳನ್ನು ವೈದಿಕ ಸಾಹಿತ್ಯದಲ್ಲಿ ಒಂದೆಡೆ ತಿಳಿಸಿದ್ದಾರೆ. ಔಪಧಿಕ ಸಾಹಿತ್ಯದಲ್ಲಿ ಉಕ್ತವಾದ ಪಂಚಲಕ್ಷಣಗಳಾವುವೆಂದರೆ :

೧. ಅಡಿಗೆ ಮನೆಯಲ್ಲಿ ಹಚ್ಚಿದ ಒಲೆ ಆರಬಾರದು. ಅಂದರೆ ಅದರ ಅರ್ಥ ಮನೆಯಲ್ಲಿ ಯಾವಾಗಲೂ ಹಾಲು ಅನ್ನ ನೀರಿನ ಕೊರತೆ ಇರದೆ ಉಣ್ಣಲು ತಿನ್ನಲು ಸಮೃದ್ಧವಾಗಿರಬೇಕು.

೨. ಮನೆಗೆ ಮುಂದೊಂದು ಬಾಗಿಲು, ಹಿಂದೊಂದು ಬಾಗಿಲಿರಬೇಕು. ಹಿಂದೆ ತೋಟ ಇರಬೇಕು. ಅಲ್ಲಿ ಸುಂದರ ಗಿಡ, ಹೂ ನೀಡುವ ಗಿಡಗಳು, ಲತೆ, ಬಳ್ಳಿ, ಹುಲ್ಲಿನ ಲಾನಿರಬೇಕು.

೩. ಮನೆಯ ಬಾಗಿಲು ಸದಾ ತೆರೆದಿರಬೇಕು. ಯಾರಾದರೂ ಪ್ರೇಮದಿಂದ ಬಂದರೆ ಬಾಗಿಲು ತೆಗೆದು ಸ್ವಾಗತಿಸಿ ಒಂದು ಲೋಟ ಹಾಲು ಕೊಡುವಷ್ಟು ದೊಡ್ಡದಿರಬೇಕು.

೪. ಮನೆಯ ಒಳಗೆ ಹೊರಗೆ ಸ್ವಚ್ಛವಿರಬೇಕು.

೫. ಮನೆಯೊಳಗಿರುವವರ ಮನ ಒಂದಾಗಿರಬೇಕು.

ಈ ಐದು ಗುಣವಿದ್ದರೆ ಆ ಮನೆಯೇ ಸ್ವರ್ಗ. ಇದೇ ಸುಂದರ ಮನೆಯ ಐದು ಲಕ್ಷಣಗಳು. ಇದರಲ್ಲಿ ಯಾವುದು ಕಡಿಮೆ ಆದರೂ ಕಾದಾಟ ಶುರುವಾಗುತ್ತದೆ. ಒಮ್ಮನಸ್ಸಿಲ್ಲದ ಮನೆ ಅಶಾಂತಿಯ ಬೀಡಾಗುತ್ತದೆ.

ಈ ಐದು ಲಕ್ಷಣಗಳೇ ವಾಸ್ತುಶಾಸ್ತ್ರ. ಇದನ್ನು ಬಿಟ್ಟು ಮನೆ ಮನ ನೆಮ್ಮದಿ ಇರುವುದಿಲ್ಲ. ಮನೆ ಕಟ್ಟಿದರೆ ಇಂಥ ಮನೆ ಕಟ್ಟಬೇಕು. ಊರಿನಲ್ಲೊಂದು ಇಂಥ ಮನೆ ಜಾಗ ತೆಗೆದುಕೊಂಡು ಕಟ್ಟಬೇಕೆಂದಲ್ಲ, ಬೇರೆಯವರು ಬಂದಾಗ ಭಿನ್ನಭಾವ ತೋರದೆ ಸ್ವಾಗತಿಸುವ ಮನೆ ಆದಾಗಿರಬೇಕು. ಯಾರಾದರು ಬಂದರೆ ಪ್ರೇಮದಿಂದ ಸ್ವಾಗತಿಸುವ ಮನೆ ಕಟ್ಟಬೇಕು. ಇಂಥ ಪ್ರೇಮದ ಮನೆ ಊರು ಊರಲ್ಲಿ ಇದ್ದರೆ ದೇಶ ಶ್ರೀಮಂತವಾಗುತ್ತದೆ. ಇಂಥ ಮನೆ ಕಟ್ಟಿದವರು ಶರಣರು.

ಶರಣರು ''ಮನೆ ನೋಡಾ ಬಡವರು. ಇಂಥ ಮನೆಯಲ್ಲಿದ್ದು ಜ್ಞಾನದ ಸಿರಿಯನ್ನು ಹರವಿ ಹೋದರು. ನಮ್ಮ ಮನೆಗಳು ಕೇವಲ ಕಟ್ಟಡದಿಂದಾಗಬಾರದು. ಬೆಲೆ ಕಟ್ಟಲಾಗದಂತಿರಬೇಕು. ''ಯಾವ ಮನೆ ಬೆಲೆ ಕಟ್ಟಲಾಗುವುದೋ ಅದು ಕಟ್ಟಡ'' ಬೆಲೆ ಕಟ್ಟಲಾಗುವುದಿಲ್ಲವೋ ಅದೇ ಮನೆ''– ಪ್ರೇಮದಿಂದ ಕಟ್ಟಿದ ಮನೆಗೆ ಬೆಲೆ ಎಲ್ಲಿಗೆ? ಇಂಥ ಪ್ರೇಮದ ಮನೆ ನಿರ್ಮಾಣವಾದರೆ ಭಾರತ ಭವ್ಯವಾಗುತ್ತದೆ.

*ಸರ್ವೇಜನಾ ಸುಖಿನೋಭವಂತು ಸರ್ವೇ ಸಂತು ನಿರಾಮಯ /*
*ಸರ್ವೇ ಭದ್ರಾಣಿ ಪಶ್ಯಂತು ಸಕ್ಕಿದ್ದುಃಖಮಾತ್ರಯಾತ್ //*

ಎಂಬುದು ಪ್ರತಿ ಮನೆಯಲ್ಲಿರಬೇಕು. ಎಲ್ಲರಿಗೂ ಒಳಿತಾಗಬೇಕು ಎಲ್ಲರೂ ಸುಖಿವಾಗಿರಬೇಕು. ಮನ ತೃಪ್ತವಾಗಿರಬೇಕು. ಹೃದಯದಲ್ಲಿ ಬೇರೆ ಭಾವನೆಗಳಿರಬಾರದು. ಇಂಥ ವ್ಯಕ್ತಿಗಳು ಮನೆಯಲ್ಲಿದ್ದರೆ, ಇಂಥ ವಾಸ್ತುಶಾಸ್ತ್ರ ಪ್ರಾರಂಭವಾದರೆ ಭಾರತ ಒಂದು ದಿನ ಜಗತ್ತಿನ ಶ್ರೇಷ್ಠ ದೇಶವಾಗುತ್ತದೆ.

ಷೋಪೆನ ಹವರ್ ಒಂದೆಡೆ ''ಒಂದಲ್ಲ ಒಂದು ದಿನ ಜಗತ್ತಿನಲ್ಲಿ ಭಾರತೀಯ ಅಧ್ಯಾತ್ಮಿಕರಂಗ ಜಗತ್ತಿನ ಧರ್ಮವಾದೀತು'' – ಇದು ಅಧ್ಯಾತ್ಮ. ಇದು ಸುಂದರ ದೇಶ. ಇಂಥ ಸುಂದರ ದೇಶದಲ್ಲಿ ಪ್ರೀತಿ, ಪ್ರೇಮ ಎಂಬ ಇಟ್ಟಿಗೆಗಳಿಂದ ಕೂಡಿದ ಮನೆ ನಿರ್ಮಾಣವಾಗಬೇಕು. ಮನೆ ಬಾಗಿಲು ಯಾವ ದಿಕ್ಕಿಗಿದ್ದರೇನು? ಅಲ್ಲಿ ವಾಸಿಸುವ ಮಂದಿ ದಿಕ್ಕು ತಪ್ಪಬಾರದು. ಕಟ್ಟುವುದಾದರೆ ಇಂಥ ಮನೆ ಕಟ್ಟಬೇಕು ಆಗ ಶಾಂತಿ ನೆಮ್ಮದಿ ತಾಳಲು ಸಾಧ್ಯ.

ಸಂಗ್ರಹ : ರಾಜೇಂದ್ರಶಿಶು





# ವಿಶ್ವಮಾನವ ಬಸವಣ್ಣ

– ಕವಿತಾಕೃಷ್ಣ
ಸಾಹಿತಿಗಳು,
ಕ್ಯಾತಸಂದ್ರ, ತುಮಕೂರು.

ವಿಶ್ವಮಾನವ ಬಸವಣ್ಣನವರು ವಿಶ್ವದ ಅತಿಶ್ರೇಷ್ಠ ವ್ಯಕ್ತಿಗಳ ಸಾಲಿನಲ್ಲಿ ನಿಲ್ಲುವಂತ ಧೀಮಂತರು. ಅವರು ನುಡಿದಂತೆ ನಡೆದು, ಮನುಜಮತಕ್ಕೆ ಬೆಳಕು ತೋರಿ ಶರಣ ಕುಲಕ್ಕೆ 'ಅಣ್ಣ' ಎನಿಸಿದರು. ಕರ್ನಾಟಕದ ಇತಿಹಾಸದಲ್ಲಿ ೧೨ನೆಯ ಶತಮಾನ ಸುವರ್ಣ ಅಕ್ಷರಗಳಲ್ಲಿ ಬರೆದಿಡುವಂತದ್ದು. ಅವರ 'ಕ್ರಾಂತಿಕಾರಕ ಬದುಕು' ಇಂದಿಗೂ ಅಪೇಕ್ಷಣೀಯ ಹಾಗೂ ಅನುಕರಣೀಯ.

೧೨ನೆಯ ಶತಮಾನವನ್ನು ಕೆಲವು ಸಾಹಿತ್ಯ ಚರಿತ್ರೆಕಾರರು 'ವಚನಯುಗ'ವೆಂದು ಕರೆದರೆ ಮತ್ತೆ ಕೆಲವರು 'ಬಸವ ಯುಗ'ವೆಂದು ಕರೆದಿದ್ದಾರೆ. 'ವಚನ ಎಂದರೆ ಬಸವಣ್ಣ; ಬಸವಣ್ಣ ಎಂದರೆ ವಚನ' ಎನ್ನುವಷ್ಟರ ಮಟ್ಟಿಗೆ ಅಂದು ಸಾಹಿತ್ಯ ಕ್ರಾಂತಿಯಾಗಿದೆ. ಅದು ಧಾರ್ಮಿಕ ಕ್ರಾಂತಿಯೂ ಹೌದು.

ಮಡಿ-ಮೈಲಿಗೆ ಹೆಸರಿನಲ್ಲಿ ಮಾನವ ಕುಲವನ್ನು ಇಬ್ಭಾಗ ಮಾಡಿದ ಸ್ವಾರ್ಥಿಗಳ ವಿರುದ್ಧ ಬಸವಣ್ಣನವರು ಧರ್ಮ ಕಾಳಗವನ್ನು ಸಾರಿದರು. ಭಗವಂತ ಮೇಲು ಜಾತಿಯವರ ಸೊತ್ತು ಮಾತ್ರವಲ್ಲ, ಕಾಯಕ ನಿರತನಾದ ಪ್ರತಿಯೋರ್ವ ಮಾನವನ ಸೊತ್ತು. ಆತ ಶರಣರ ಪ್ರೇಮಿ ಎಂದು ಸಾರಿದರು.

ದೀನ-ದಲಿತರ-ಅಸ್ಪೃಶ್ಯರ ಶೋಷಣೆ ನಡೆಯುವ ಕಾಲದಲ್ಲಿ ಬಸವಣ್ಣನವರು ಮೈಲಿಗೆಯವರ ಧ್ವನಿಯಾದರು. ಅವರ ಉದ್ಧಾರಕ್ಕಾಗಿ ಹೋರಾಟಕ್ಕೆ ತಮ್ಮನ್ನು ತೊಡಗಿಸಿಕೊಂಡರು.

''ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ'' ಎಂದು ಸಾರಿದರು, ಡಂಬಾಚಾರಿಗಳನ್ನು ಕಟ್ಟುಗ್ರವಾಗಿ ಖಂಡಿಸಿದರು. ''ಹೊಲಸು ತಿಂಬುವವನೆ ಹೊಲೆಯ'' ಎಂದು ಕೂಗಿ ಸಾರಿದರು.

'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು' ಎಂದು ಎಚ್ಚರಿಸಿ ಇಹದ ಬದುಕಿಗೆ ಬಹುಮಹತ್ವವನ್ನು ತಂದರು.

''ಶಾಸ್ತ್ರವೆಂಬುದು ಸಂತೆಯ ಸುದ್ದಿ'' ಎಂದು ಮೂದಲಿಸಿ, ಶರಣಕುಲವನ್ನು ಕಟ್ಟಿದರು. ಕಾಯಕತತ್ತ್ವಕ್ಕೆ ಬಹುಮನ್ನಣೆಯಿತ್ತರು. ದುಡಿಮೆಯಲ್ಲಿ ದೇವರನ್ನು ಕಾಣುವಂತಹ ಅತಿ ಶ್ರೇಷ್ಠ ಮಾರ್ಗ ತೋರಿದರು.

ಪಂಚನದಿಗಳ ಬೀಡಾದ ಬಿಜಾಪುರ ಜಿಲ್ಲೆಯಲ್ಲಿ ಬಸವಣ್ಣನವರು ಶೈವಬ್ರಾಹ್ಮಣರಾಗಿ ಜನಿಸಿದರು. ಮತದ ಕ್ರೂರ ಕಟ್ಟಲೆಗಳಿಂದ ಸಿಡಿದು ಹೊರಬಂದರು. ಜನಿವಾರವನ್ನು ಕಿತ್ತೆಸೆದು ಕ್ರಾಂತಿಗೆ ನಾಂದಿ ಹಾಡಿದರು.

ಮೇಲು-ಕೀಳೆನ್ನದೆ, ದಲಿತ-ಬಲಿತ ಎನ್ನದೆ ಎಲ್ಲರನ್ನು ಒಗ್ಗೂಡಿಸಿ ಶರಣರೆಂದು ಕರೆದು, ವಚನ ಸಾಹಿತ್ಯ ನಿರ್ಮಾಣದ ಮುಖಾಂತರ ಜಗತ್ತನ್ನು ಸೋಜಿಗಗೊಳಿಸಿದರು. ಅವರ ಕಾಲದಲ್ಲಿ ಜನಸಾಮಾನ್ಯರೆಲ್ಲ ಬರಹಗಾರರಾದರು. ಇದೊಂದು ಅಚ್ಚರಿಯ ಸಂಗತಿ.

ಅನುಭವಗಳನ್ನು ಮುಕ್ತವಾಗಿ ವಚನ ರೂಪದಲ್ಲಿ ಹಾಡಿ ಕನ್ನಡ ಸಾಹಿತ್ಯದ ಸಿರಿವಂತಿಕೆಯನ್ನು ಹೆಚ್ಚಿಸಿದರು. ಪಂಡಿತರ ಸೊತ್ತಾಗಿದ್ದ ಸಾಹಿತ್ಯ ಶ್ರೀಸಾಮಾನ್ಯರ ಸೊತ್ತಾಯಿತು. ಕಠಿಣತನದಿಂದ ಸರಳ ಸಂಸ್ಕೃತಿಯೆಡೆಗೆ ಸಾಗಿತು. ಅರಮನೆಗಳಿಂದ ಗುರುಮನೆ, ಗುರುಮನೆಗಳಿಂದ ಅರಮನೆಗಳತ್ತ ಹರಿದಾಡುತ್ತಿದ್ದ ಸಾಹಿತ್ಯದ ತೇರು ಗುಡಿಸಲುಗಳಿಂದ ಕೇರಿಗೆ, ಕೇರಿಗಳಿಂದ ರಾಜಬೀದಿಗೆ ಹರಿಯುವಂತಾಯಿತು.

ಸರಳ ಸೌಂದರ್ಯದ ವಚನ ಸಾಹಿತ್ಯ ಅನುಭವಿಗಳ, ಅನುಭಾವಿಗಳ ಅಭಿವ್ಯಕ್ತಿಯಿಂದ ಸಂವೃದ್ಧಿ ಹೊಂದಿತು. ನೂರಾರು-ಸಾವಿರಾರು ಮಂದಿ ವಚನಕಾರರು ಸೃಷ್ಟಿಗೊಂಡರು.

ಬಸವಣ್ಣ ಬಿಜ್ಜಳ ರಾಜನಲ್ಲಿ ಮಹಾಮಂತ್ರಿಯಾಗಿದ್ದರೂ ಸಹ ರಾಜಕೀಯದಲ್ಲಿ ಮೆರೆದಾಡಲಿಲ್ಲ: ಪದವಿ ಪಟ್ಟಕ್ಕಾಗಿ ಹಂಚಿಕೆ ಹೂಡಲಿಲ್ಲ. ಬದಲಾಗಿ ಜನಸಾಮಾನ್ಯರ ಉದ್ಧಾರಕ್ಕಾಗಿ ಹಗಲಿರುಳು ನಿರಂತರವಾಗಿ ಹೋರಾಡಿದರು.

ಧರ್ಮದ ಬಗ್ಗೆ ಹೊಸದೃಷ್ಟಿ-ಅರ್ಥ ಮೂಡಿಸಿ, 'ದಯವೇ ಧರ್ಮದ ಮೂಲವಯ್ಯ' ಎಂದು ಕೂಗಿ ದಯೆಯ ಹಿರಿಮೆ-ಗರಿಮೆಗಳನ್ನು ಎತ್ತಿಹಿಡಿದರು. 'ಅಯ್ಯ ಎಂದರೆ ಸ್ವರ್ಗ, ಎಲ್ಲವೋ ಎಂದರೆ ನರಕ' ಎಂದ ಮಾತಿನ ಮಹತ್ವವನ್ನು ಜನತೆಗೆ ತಿಳಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸಿದರು. ಮಾತು ಎಂಬುದು ಅವರು ದೃಷ್ಟಿಯಲ್ಲಿ ಜ್ಯೋತಿರ್ಲಿಂಗವಾಯಿತು.

ಇನ್ನು ಸ್ವರ್ಗ-ನರಕಗಳ ಬಗ್ಗೆ ಸಲ್ಲದ ವಿವರಣೆ ಇದ್ದುದನ್ನು ಕಂಡ ಬಸವಣ್ಣನವರು 'ಆಚಾರವೇ ಸ್ವರ್ಗ, ಅನಾಚಾರವೆ ನರಕ' ಎಂದು ಅತಿ ಸೂಕ್ಷ್ಮವಾಗಿ ಅರ್ಥೈಸಿದರು. ನಡೆ-ನುಡಿಗಳನ್ನು ತಿದ್ದಿಕೊಳ್ಳಲು ನೀಡಿದ ಅಮೂಲ್ಯ ಸಲಹೆ ಇಂದಿಗೂ ಕೂಡ ಪ್ರಸ್ತುತ.

ಅಣ್ಣ ಕಟ್ಟಿದ ಅನುಭವ ಮಂಟಪದಲ್ಲಿ ಗಂಡು-ಹೆಣ್ಣು ಎಂಬ ಲಿಂಗ ಲಿಂಗಭೇದಕ್ಕೆ ಅವಕಾಶವಿರಲಿಲ್ಲ. ಶರಣತನವನ್ನು ಒಪ್ಪುವವರೆಲ್ಲರಿಗೂ ಮುಕ್ತ ಅವಕಾಶವಿತ್ತು. ಜಾತಿಗಿಂತ ನೀತಿಗೆ ಮಹತ್ವ ನೀಡಿದವರಲ್ಲಿ ಬಸವಣ್ಣನವರು ಅಗ್ರಮಾನ್ಯವ್ಯಕ್ತಿ. ಉತ್ತಮ- ಸ್ಥಾನಮಾನಗಳಿಂದ ವಂಚಿತಳಾಗಿದ್ದ ಸ್ತ್ರೀಗೆ ಅಣ್ಣನ ಕಾಲದಲ್ಲಿ ಮಾನ್ಯತೆ ದೊರಕಿತು. ಅದರ ಫಲವೇ ಮಹಾದೇವಿಯು ಶರಣಕುಲದಲ್ಲಿ ಅಕ್ಕನಾಗಿ ಮೆರೆದಳು.

ಇನ್ನು ಮಡಿವಾಳ ಮಾಚಯ್ಯ, ಸಮಗಾರ ಹರಳಯ್ಯ, ಕುಂಬಾರ ಗುಂಡಯ್ಯ, ಅಂಬಿಗರ ಚೌಡಯ್ಯ, ಡೋಹರ ಕಕ್ಕಯ್ಯ, ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮ, ಬಿಜ್ಜಳದೇವಿ, ನೀಲಲೋಚನೆ ಮುಂತಾದ ವಿವಿಧ ಜಾತಿಗೆ ಸೇರಿದವರೆಲ್ಲ ಒಂದೆಡೆ ಕೂಡಿದರು.

ಧಾರ್ಮಿಕ ಚಳುವಳಿ ನಡೆಸಿ ಸಾಹಿತ್ಯ ಸೃಷ್ಟಿಯಲ್ಲಿ ಹೊಸತನ ತೋರಿ, ಮಾನವ ಕುಲವೆಲ್ಲ ಒಂದೇ ಎಂದು ಸಾರಿದರು. ನಡೆ-ನುಡಿಯಲ್ಲಾದ ಅವಿನಾಭಾವ ಬಾಂಧವ್ಯವನ್ನು ಎಂದಿಗೂ ಕಡೆಗಾಣಿಸುವಂತೆಯೇ ಇಲ್ಲ.

ಅನುಭವ ಮಂಟಪವು ಶರಣರ ದೇವರ ಕೂಟವಾಗಿಸದೆ, ಅದು ಅಧ್ಯಾತ್ಮಿಕ ಚಿಂತನೆಯ ಮುಕ್ತ ವಿಶ್ವವಿದ್ಯಾಲಯವಾಗಿತ್ತು.

ಶರಣರ ಹಿರಿಮೆಗೆ ಮನಸೋತು ಕಾಶ್ಮೀರದ ರಾಜ ಸಿಂಹಾಸನವನ್ನು ತ್ಯಜಿಸಿ, ಸತಿಯೊಡನೆ ಶರಣನಾದ ಉದಾಹರಣೆಯೊಂದೇ ಸಾಕು. ಬಸವಣ್ಣನವರ ವ್ಯಕ್ತಿತ್ವಕ್ಕೆ ಹಿಡಿದ ರನ್ನಗನ್ನಡಿಯಾಗಿದೆ.

★

## ಆಧುನಿಕ ವಚನಗಳು

### ಅಭಿಮಾನ

ಅಭಿಮಾನವಿರಬೇಕು, ದೇಶ ನಮ್ಮದೆಂದು
ಅಭಿಮಾನವಿರಬೇಕು, ಭಾಷೆ ನಮ್ಮದೆಂದು
ಅಭಿಮಾನವಿರಬೇಕು, ಸಂಸ್ಕೃತಿ ನಮ್ಮದೆಂದು
ಅಭಿಮಾನವಿರಬೇಕು, ನಾವು ಮಾಡುವ ವೃತ್ತಿ ಶ್ರೇಷ್ಠವೆಂದು
ಅಭಿಮಾನವಿರಬೇಕು, ಬೆವರು ಸುರಿಸಿ ಗಳಿಸಿದ ಗಳಿಕೆಯಲ್ಲಿ
ಅಭಿಮಾನವಿರಬೇಕು, ದುರಭಿಮಾನ ಸಲ್ಲದು
ಹರಳೂರು ವೀರಭದ್ರ ಪ್ರಭುವೆ

### ಅಧಿಕಾರ

ಅಧಿಕಾರವೆಂಬುದು ಕ್ಷಣಕಾಲ ಮಿಂಚಿ ಮಾಯವಾಗುವ ಕಾಮನಬಿಲ್ಲು
ಅಧಿಕಾರವೆಂಬುದು ನೀರ ಮೇಲಿನ ಗುಳ್ಳೆ
ಅಧಿಕಾರವೆಂಬುದು ಮಕ್ಕಳು ಮರಳಲ್ಲಿ ಕಟ್ಟುವ ಮನೆ
ಅಧಿಕಾರವೆಂಬುದು ನೀರ ಮೇಲೆ ಬರೆದ ಜೀವನ ಸಂಗೀತ
ಅಧಿಕಾರವೆಂಬುದು ಹಸಿಮಣ್ಣಿನ ಮಡಕೆಯಲ್ಲಿ ತುಂಬಿಟ್ಟ ನೀರು
ಅಧಿಕಾರವೆಂಬುದು ಅಡಿಪಾಯವಿಲ್ಲದ ಕಟ್ಟಿದ ಮನೆ
ಅಧಿಕಾರವೆಂಬುದು ಸೇವೆಗೆ ದೊರೆತ ಸದಾವಕಾಶವೆನ್ನದೆ
ವಿಲಾಸ ಜೀವನಕ್ಕೆ ನೀಡಿದ ಪರವಾನಿಗೆ ಎನ್ನುವರ ಕಂಡು
ನಗೆಯು ಬರುತಿದೆ ಹರಳೂರು ವೀರಭದ್ರ ಪ್ರಭುವೆ

### ಹೆಸರು

ಹೆಸರನು ದಾಖಲಿಸಲು ಏನೆಲ್ಲಾ ಕಸರತ್ತು ಮಾಡುವರಯ್ಯಾ
ಕಾಯಕವ ಮಾಡದೆ ಬೆವರು ಸುರಿಸದೆ ಪ್ರತಿಫಲವ
ಬಯಸುವರಯ್ಯಾ
ಎತ್ತ ನೋಡಿದರೂ ಅಂಥವರೇ ತುಂಬಿಹರಯ್ಯಾ.
ಕಡಲ ತೀರದಲ್ಲಿ ಮರಳ ಮನೆಯ ಕಟ್ಟಿ ಶಾಶ್ವತವೆಂಬುವರ ಕಂಡು
ಕನಿಕರ ಮೂಡುವುದಯ್ಯಾ.
ಲೋಕಕೆ ಬೆಳಕ ನೀಡುವ ಸೂರ್ಯ, ಅನ್ನಕೊಡುವ ದೈವ
ಮನಕೆ ಮುದನೀಡುವ ಕಮಲ; ಮಧುರ ಫಲವ ನೀಡುವ ಮರ
ಹೆಸರಿಗೆ ಹಂಬಲಿಸಲಿಲ್ಲ; ಹೆಸರು ಉಳಿಸಿರೆಂದೂ ಬೊಬ್ಬೆಯಿಡಲಿಲ್ಲ
ಹರಳೂರು ವೀರಭದ್ರ ಪ್ರಭುವೆ.

– ಎಚ್.ಎಸ್. ಸಿದ್ಧಗಂಗಪ್ಪ





# ಶಿಕ್ಷಕರ ದಿನಾಚರಣೆಯ ಔಚಿತ್ಯ – ಒಂದು ಚಿಂತನೆ

– ಆರ್. ನಾಗರಾಜಯ್ಯ
ಪ್ರಾಧ್ಯಾಪಕರು,
ರಾಷ್ಟ್ರೀಯ ಶಿಕ್ಷಣ ಮಹಾವಿದ್ಯಾಲಯ
ಜಯನಗರ, ಬೆಂಗಳೂರು – ೧೧.

ನಮ್ಮ ರಾಷ್ಟ್ರದಲ್ಲಿ ಪ್ರತಿವರ್ಷ ಸೆಪ್ಟೆಂಬರ್ ತಿಂಗಳಲ್ಲಿ ಶಿಕ್ಷಕರ ದಿನಾಚರಣೆಯನ್ನು ಆಚರಿಸುತ್ತಿರುವುದು ಒಂದು ಸಾಂಪ್ರದಾಯ ಮತ್ತು ಸಂಸ್ಕೃತಿಯ ಸಂಕೇತ. ಪ್ರಪಂಚದ ಯಾವುದೇ ರಾಷ್ಟ್ರದ ಪರಂಪರೆಯನ್ನು ಅವಲೋಕಿಸಿದಾಗ, ಆ ಸಮಾಜಗಳಲ್ಲಿ ಶಿಕ್ಷಕರಿಗೆ ತೋರಿಸುವ ಗೌರವ, ಭಕ್ತಿಯನ್ನು ನಮ್ಮ ರಾಷ್ಟ್ರಕ್ಕೆ ಹೋಲಿಸಿದಾಗ, ಭಾರತದಲ್ಲಿ ಶಿಕ್ಷಕರಿಗೆ ತೋರಿಸುವ ಗೌರವ ಖಂಡಿತ ಮೆಚ್ಚುವಂತಹುದು. ಇದಕ್ಕೆ ನಮ್ಮ ರಾಷ್ಟ್ರದ ಪ್ರಾಚೀನ ಗುರುಪರಂಪರೆಯೇ ಮುಖ್ಯ ಕಾರಣ, ಜೊತೆಗೆ ಇಡೀ ಭೂಮಂಡಲದಲ್ಲಿ ಭಾರತ ಒಂದು ವಿಶೇಷ ಸೃಷ್ಟಿಗೆ ಹೆಸರಾದ ರಾಷ್ಟ್ರ. ಸಂಪ್ರದಾಯಗಳಿಗೆ, ಆಚಾರ ವಿಚಾರಗಳಿಗೆ, ಸಾಂಸ್ಕೃತಿಕ ಪರಂಪರೆಗೆ, ಧಾರ್ಮಿಕ ಶ್ರದ್ಧೆಗೆ, ಗುರು ಹಿರಿಯರಿಗೆ ಗೌರವ ಸೂಚಿಸುವ ವಿಚಾರಗಳಲ್ಲಿ ಎಲ್ಲಾ ರಾಷ್ಟ್ರಗಳಿಗಿಂತಲೂ ಒಂದು ಹೆಜ್ಜೆ ಮುಂದೆ ನಿಂತವರು ನಾವು. ಮೇಲಾಗಿ, ಅನೇಕ ಮಹನೀಯರಿಗೆ, ಭಕ್ತರಿಗೆ, ಯೋಗಿಗಳಿಗೆ, ಸಮಾಜ ಸುಧಾರಕರಿಗೆ, ಶಿಕ್ಷಣ ತಜ್ಞರಿಗೆ, ಶಾಂತ ಪ್ರಿಯರಿಗೆ, ಧಾರ್ಮಿಕ ಸುಧಾರಕರಿಗೆ, ವಿಜ್ಞಾನಿಗಳಿಗೆ, ಮೇಧಾವಿ ಶಿಕ್ಷಕರಂತಹ ಡಾ. ಎಸ್. ರಾಧಾಕೃಷ್ಣರವರಿಗೆ ಜನ್ಮಕೊಟ್ಟ ರಾಷ್ಟ್ರ. ಇಂತಹ ಮಹನೀಯರುಗಳು ನಮ್ಮ ನೆಲದ ಸ್ಪರ್ಶ ಮಾಡಿ ನಡೆದಾಡಿದ ನೆಲದ ಮೇಲೆ ಜೀವಿಸುತ್ತಿರುವ ನಾವೇ ಪುಣ್ಯವಂತರು, ಧನ್ಯರು.



"ನೈಜತೆ, ಪ್ರಾಮಾಣಿಕತೆ, ನಿಸ್ವಾರ್ಥತೆ ಇವುಗಳ ಅರ್ಥಪೂರ್ಣ ಅನುಸರಣೆಯೇ ನಾಗರೀಕತೆಯ ಅಭಿವೃದ್ಧಿಗೆ ರಾಜಮಾರ್ಗ. ಸಮಾಜದ ಪರಿಪೂರ್ಣ ಪರಿವರ್ತನೆಯ ಏಕೈಕ ಪರಿಣಾಮಕಾರಿ ಮಾರ್ಗವೆಂದರೆ ಪ್ರತಿಯೊಬ್ಬರನ್ನು ವೈಯಕ್ತಿಕವಾಗಿ ಪರಿವರ್ತಿಸುವುದು. ಈ ದಿಸೆಯಲ್ಲಿ ಸಹನೆಯುತ ಪ್ರಯತ್ನ ನಡೆದರೆ ಯಶ ಖಂಡಿತ".

"ಮನುಷ್ಯನಲ್ಲಿ ಭಯ-ನೋವುಗಳಿಗೆ ಅವನಲ್ಲಿ ಉಂಟಾಗುವ ಸಂಘರ್ಷವೇ ಕಾರಣ. ಮನುಷ್ಯ, ಇಹ- ಪರ ಹೀಗೆ ಎರಡು ಜಗತ್ತುಗಳಿಗೆ ಸೇರಿರುತ್ತಾರೆ. ಅವನು ಇವೆರಡರ ಕೊಂಡಿ ಕೂಡ. ಆದ್ದರಿಂದ ಮನುಷ್ಯನ ಜೀವನ ಗೋಚರ-ಅಗೋಚರಗಳ ನಡುವಿನ ನಿರಂತರ ನಾಟಕ".

– ಡಾ. ಎಸ್. ರಾಧಾಕೃಷ್ಣನ್

ಡಾ. ಎಸ್. ರಾಧಾಕೃಷ್ಣನ್ ಉತ್ತಮೋತ್ತಮ ಶಿಕ್ಷಕ ಎಂದು ಹೆಸರು ಪಡೆದ ಶಿಕ್ಷಕರಾಗಿದ್ದರು. ಒಬ್ಬ ಉತ್ತಮ ಶಿಕ್ಷಕ ಏನನ್ನು ಬೇಕಾದರೂ ಸಾಧಿಸಬಲ್ಲ ಶಕ್ತಿ ಹೊಂದಿದ್ದಾನೆ ಎಂಬುದಕ್ಕೆ ಡಾ. ಎಸ್. ರಾಧಾಕೃಷ್ಣನ್ ಅಲಂಕರಿಸಿದ್ದ ವಿವಿಧ ಹುದ್ದೆಗಳು. ಅವರು ಶಿಕ್ಷಕರಾಗಿದ್ದರು, ರಾಜಕೀಯ ಚಿಂತಕರಾಗಿದ್ದರು, ರಾಷ್ಟ್ರಪತಿಯಾಗಿದ್ದರು, ರಾಷ್ಟ್ರಾಭಿಮಾನಿಯಾಗಿದ್ದರು. ಆದರೆ ಎಂದೂ ರಾಜಕಾರಣಿಯಂತೆ ವರ್ತಿಸಲಿಲ್ಲ. ತಮಗೆ ರಾಷ್ಟ್ರ ವಹಿಸಿದಂತಹ ಜವಾಬ್ದಾರಿಗಳನ್ನು ಗೌರವ, ಶ್ರದ್ಧೆ, ಶಿಸ್ತು ಮತ್ತು ಸಾಮಾಜಿಕ ಕಳಕಳಿಯಿಂದ ನಿರ್ವಹಿಸಿದಂತಹ ಕೀರ್ತಿ ಅವರಿಗೆ ಸಲ್ಲುತ್ತದೆ. ತತ್ವಜ್ಞಾನಿಯಾದವನು ಆಳುವವನಾಗಬೇಕು ಎಂಬ ಗ್ರೀಕ್ ತತ್ವಜ್ಞಾನಿ ಪ್ಲಾಟೋವಿನ ಉಲ್ಲೇಖದಂತೆ, ರಾಷ್ಟ್ರದ ಪ್ರಥಮ ಪ್ರಜೆಯಾಗಿ ಸೇವೆ ಸಲ್ಲಿಸಿ ಸಮರ್ಪಕ ಮತ್ತು ದಕ್ಷ ಆಡಳಿತಗಾರ ಎನಿಸಿಕೊಂಡ ಕೆಲವೇ ವ್ಯಕ್ತಿಗಳಲ್ಲಿ ಒಬ್ಬರಾದವರು ಮಹಾನ್ ಚಿಂತಕ ಡಾ. ಎಸ್. ರಾಧಾಕೃಷ್ಣನ್. ತಮ್ಮ ಜನ್ಮ ದಿನಾಚರಣೆಯನ್ನು ಶಿಕ್ಷಕರ ದಿನಾಚರಣೆಯಾಗಿ ಆಚರಿಸುವಂತೆ ಮಾಡಿದ ಮಹಾಗುರುವಿಗೆ ನಾವು ತಲೆಬಾಗಿ ನಮಸ್ಕರಿಸಬೇಕು. ಅದಕ್ಕಾಗಿ ರಾಷ್ಟ್ರ ಶಿಕ್ಷಕರ ದಿನಾಚರಣೆಯನ್ನು ಒಂದು ಹಬ್ಬದ ರೀತಿಯಲ್ಲಿ ನಡೆಸುತ್ತಾ ಬಂದಿದೆ. ಕಾರಣ ರಾಷ್ಟ್ರ ನಿರ್ಮಾಣ ಮಾಡುವಂತಹ ಶಿಕ್ಷಕರನ್ನು

ಸ್ಮರಿಸಿಕೊಳ್ಳುವಂತಹ ಒಂದು ಮಹತ್ತರವಾದ ಜವಾಬ್ದಾರಿಯನ್ನು ಸಮಾಜಕ್ಕೆ ತೋರಿಸಿ ಕೊಟ್ಟಂತಹ ಮಹಾನ್ ಸಾಧಕ. ಇಂತಹ ಮಹಾಪುರುಷನ ಜೀವನದ ಸಾಧನೆಗಳನ್ನು ನೆನಪಿಸಿಕೊಳ್ಳುವ ದಿನವೇ ಸೆಪ್ಟೆಂಬರ್ ೫. ಶಿಕ್ಷಕರ ದಿನಾಚರಣೆಯ ದಿವಸ ಶಿಕ್ಷಕರಾಗಿ ನಾವು ಮಾಡ ಬೇಕಾದ ಪ್ರತಿಜ್ಞೆಗಳೇನು? ನಮ್ಮ ಜವಾಬ್ದಾರಿಗಳೇನು? ನಮ್ಮ ಮುಂದಿರುವ ಸವಾಲುಗಳೇನು? ಎಂದು ಚಿಂತಿಸಿದರೆ, ಭವಿಷ್ಯ ಆಶಾದಾಯಕವಾಗಿಲ್ಲ.

ಇತ್ತೀಚಿನ ದಿನಗಳಲ್ಲಿ ಖಾಸಗೀಕರಣ, ಜಾಗತೀಕರಣದ ಹೆಸರಿನಲ್ಲಿ ಮನುಷ್ಯ ಯಂತ್ರದ ರೀತಿಯಲ್ಲಿ ಕೆಲಸ ಮಾಡುತ್ತಿದ್ದಾನೆ. ಇದು ಕಂಪ್ಯೂಟರ್‌ಯುಗ, ಒಂದು ಯಂತ್ರ. ಇದಕ್ಕೆ ಭಾವನೆಗಳಿಲ್ಲ, ಆದರೆ ಇದಕ್ಕೆ ನಾವು ಶರಣಾಗುವ ಸ್ಥಿತಿ ಬಂದಿದೆ. ಯಂತ್ರಯುಗದಲ್ಲಿ ಮನುಷ್ಯ ತನ್ನ ಗುರುತರವಾದ ಜವಾಬ್ದಾರಿಗಳನ್ನು ಕಾಪಾಡಿಕೊಳ್ಳುವುದು ಕಷ್ಟವಾಗಿದೆ. ಆದ್ದರಿಂದ ಶಿಕ್ಷಕರ ದಿನಾಚರಣೆಯಂತಹ ಶುಭದಿನಗಳಲ್ಲಿ ನಾವು ತೆಗೆದುಕೊಳ್ಳಬೇಕಾದ ಪ್ರತಿಜ್ಞೆಯೆಂದರೆ, ನಮ್ಮ ಕರ್ತವ್ಯವನ್ನು ನಿಷ್ಠೆಯಿಂದ, ಶ್ರದ್ಧೆಯಿಂದ, ಶಿಸ್ತಿನಿಂದ ಪ್ರಾಮಾಣಿಕತೆಯಿಂದ ಯಾವುದೇ ರೀತಿಯ ಆರ್ಥಿಕ ಲಾಭವನ್ನು ಬಯಸದೆ ನಿರ್ವಹಿಸುತ್ತೇವೆ ಎಂದು. ಶಿಕ್ಷಕ ವೃತ್ತಿ ಆರ್ಥಿಕ ಸಂಪಾದನೆಗೆ ಹೆಸರಾದ್ದಲ್ಲ. ಶಿಕ್ಷಕರಾಗಲು ಮಾನಸಿಕ ಸಿದ್ಧತೆ, ತಮ್ಮನ್ನು ತಾವೇ ಅರ್ಪಿಸಿಕೊಂಡು ಕೆಲಸ ಮಾಡುವ ಅರ್ಪಣಾ ಮನೋಭಾವನೆ ಇರಬೇಕು. ಇಂತಹವರು ಮಾತ್ರ ಸೇವೆ ಮಾಡಬಲ್ಲ ಶಿಕ್ಷಕರಾಗುತ್ತಾರೆ. ಆದರೆ ಶಿಕ್ಷಕ ವೃತ್ತಿಗೆ ಈ ಮೇಲಿ ನಮೂದಿಸಿರುವ ಎಲ್ಲಾ ಅಂಶಗಳನ್ನು ಹೊಂದಿರುವಂತಹ ಶಿಕ್ಷಕರನ್ನು ಆಕರ್ಷಣೆ ಮಾಡುವುದು ಕಷ್ಟದ ಕೆಲಸ. ಅನೇಕ ಕಾರಣಗಳನ್ನಿಟ್ಟುಕೊಂಡು ಶಿಕ್ಷಕ ವೃತ್ತಿಗೆ ಬರುತ್ತಾರೆ. ಅರೆ ಮನಸ್ಸಿನಿಂದ ವೃತ್ತಿಯಲ್ಲಿ ಮುಂದುವರೆಯುತ್ತಾರೆ. ಇಂತಹ ಜನರಿಂದ ಶಿಕ್ಷಣ ಕ್ಷೇತ್ರದಲ್ಲಿ ಪವಾಡಗಳನ್ನು ನಿರೀಕ್ಷಿಸುವುದು ಕಷ್ಟ, ಆದರೆ ಅವರಿಗೆ ತಮ್ಮ ಜವಾಬ್ದಾರಿಗಳಾದ, ಒಳ್ಳೆಯ ಬೋಧನೆ, ವೃತ್ತಿವಿಕಾಸದ ಚಟುವಟಿಕೆಗಳು, ನನ್ನಿಂದ ಒಂದು ಪರಂಪರೆಯ ನಿರ್ಮಾಣವಾಗುತ್ತದೆ ಎಂಬ ಸಾಮಾಜಿಕ ಕಾಳಜಿ ಇದ್ದರೆ ಸಾಕು. ಅದಕ್ಕಾಗಿಯೇ ೧೯೮೬ ರಾಷ್ಟ್ರೀ ನೀತಿಯಲ್ಲಿ ''ಯಾವ ದೇಶವೂ ತನ್ನ ಶಿಕ್ಷಕರಿಗಿಂತ ಮೇಲೇರಲಾರದು ಎಂದು ಉಲ್ಲೇಖಿಸಿರುವುದು. ರಾಷ್ಟ್ರ ಇಂತಹ ಅಪಾರ ನಂಬಿಕೆ ಇಟ್ಟುಕೊಂಡಿರುವುದರಿಂದಲೇ ಶಿಕ್ಷಕ ವೃಂದ ಕ್ರಿಯಾಶೀಲರಾಗಬೇಕಾಗಿದೆ ಎಂದು ಒತ್ತಿ ಹೇಳಬೇಕಾದ ಪ್ರಮೇಯವಿಲ್ಲ.

ಇತ್ತೀಚಿನ ದಿನಗಳಲ್ಲಿ ಶಿಕ್ಷಕರ ಸವಾಲುಗಳೇನು ಎಂದು ಪರೀಕ್ಷಿಸಲು ಪ್ರಾರಂಭಿಸಿದರೆ, ಭಯದ ವಾತಾವರಣ ಸೃಷ್ಟಿಯಾಗುತ್ತದೆ. ಇಂದು ನಾವು ಜ್ಞಾನದ ಸ್ಫೋಟವನ್ನು ಕಾಣುತ್ತಿದ್ದೇವೆ, ಯಂತ್ರಗಳಾದ ಕಂಪ್ಯೂಟರ್ ದೂರದರ್ಶನ ಮತ್ತು ಇತರೆ ಸಮೂಹ ಮಾಧ್ಯಮಗಳು ನಮ್ಮ ಜೊತೆ ತೀವ್ರತರವಾದ ಪೈಪೋಟಿ ನಡೆಸುತ್ತಿವೆ, ಇವು ವಿಷಯವನ್ನು ತ್ವರಿತವಾಗಿ, ನಿಖರವಾಗಿ ವಿದ್ಯಾರ್ಥಿಗಳಿಗೆ ತಲುಪಿಸುವಂತಹ ಮಾರ್ಗಗಳಾಗಿವೆ. ಆದರೆ ಈ ಯಂತ್ರಗಳ ಮಧ್ಯೆ ಶಿಕ್ಷಕ ಸಿಕ್ಕಿ ನರಳುವಂತಹ ಸ್ಥಿತಿ ನಿರ್ಮಾಣವಾಗಿದೆ. ಈ ಎಲ್ಲಾ ಸವಾಲುಗಳನ್ನು ಹೆದರಿಸುವುದು ಹೇಗೆ? ಯಾರು ಎಂದು ವಿಶ್ಲೇಷಿಸಿದಾಗ ನಮಗೆ ಗೋಚರವಾಗುವುದು ಶಿಕ್ಷಕರು. ಇವರೇ ರಾಷ್ಟ್ರದ ಸಂಪತ್ತು. ಬುದ್ಧಿಜೀವಿಗಳು, ಇವರಲ್ಲಿ ಮೇಧಾವಿಗಳಿಗೆ ಕೊರತೆ ಇಲ್ಲ, ತಿಳಿವಳಿಕೆ ಉಳ್ಳವರಿಗೆ ಕೊರತೆ ಇಲ್ಲ. ತರಬೇತಿ ಹೊಂದಿದವರಿಗೆ ಕೊರತೆ ಇಲ್ಲ, ಚಿಂತನಾಶೀಲರಿಗೆ ಕೊರತೆ ಇಲ್ಲ. ಆದರೆ ಕೊರತೆ ಎದ್ದು ಕಾಣುವುದು ಅಂತಹ ಶಿಕ್ಷಕರಿಗೆ ಸಿಗಬೇಕಾದ ಸ್ಥಾನಮಾನಗಳು ಸಿಕ್ಕುತ್ತಿಲ್ಲ. ಸಮರ್ಥರನ್ನು, ಜಾಣರನ್ನು ಗುರುತಿಸಿ ಅವರಿಗೆ ಉತ್ತಮ ಕೆಲಸ ಮಾಡಿಸಲು ಸಾಧ್ಯವಾಗುತ್ತಿಲ್ಲ. ಇದಕ್ಕೆ ಕಾರಣ ಹುಡುಕಲು ಪ್ರಾರಂಭಿಸಿದರೆ ನಮ್ಮಲ್ಲಿರುವ ಶಿಕ್ಷಕಸ್ತೋಮವನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಬಹುದು.

*ತತ್ವಸಹಿತ, ಸತ್ವಹೀನ,*  
*ಸತ್ವಸಹಿತ, ತತ್ವಹೀನ,*  
*ಸತ್ವಸಹಿತ, ತತ್ವಸಹಿತ,*  
*ಸತ್ವಹೀನ ಮತ್ತು ತತ್ವಹೀನ.*

ಇಂತಹ ಶಿಕ್ಷಕರಿಗೆ ತಮ್ಮ ಹೊಣೆಗಾರಿಕೆಗಳನ್ನು ತಿಳಿಯಪಡಿಸುವುದು ಹೇಗೆ ಎಂದು ಪ್ರಸ್ತಾಪಮಾಡಲು ಪ್ರಾರಂಭಿಸಿದರೆ ನಮಗೆ ಗೋಚರವಾಗುವಂತಹ ಅಂಶಗಳೆಂದರೆ ವೃತ್ತಿ ಸಂಘಗಳು. ಶಿಕ್ಷಣ ಕ್ಷೇತ್ರದಲ್ಲಿ ಅತಿತೀವ್ರವಾದ ಗುಣಮಟ್ಟದ ಸುಧಾರಣೆಗೆ ವೃತ್ತಿ ಸಂಘಗಳು ಅತಿ ಅವಶ್ಯಕವಾದವು. ಈ ವೃತ್ತಿ ಸಂಘಗಳು ಎಲ್ಲಾ ಶಿಕ್ಷಕರನ್ನು ಒಂದು ವೇದಿಕೆಗೆ ತಂದು ತಮ್ಮ ಶೈಕ್ಷಣಿಕ ಪಾಂಡಿತ್ಯವನ್ನು ಮತ್ತು ಹೊಸ ಆವಿಷ್ಕಾರಗಳನ್ನು ಚರ್ಚಿಸಿ, ವೃತ್ತಿ ಬೆಳವಣಿಗೆ ಮಾಡಿಕೊಳ್ಳಲು ಸಹಾಯ ಮಾಡುತ್ತವೆ. ಜೊತೆಗೆ ತನ್ನ ಸದಸ್ಯರಿಗೆ ಅವರ ಕರ್ತವ್ಯಗಳನ್ನು ಜವಾಬ್ದಾರಿಗಳನ್ನು ತಿಳಿಸುವಲ್ಲಿ ಯಶಸ್ವಿಯಾಗುತ್ತವೆ. ಮೇಲಾಗಿ ಶೈಕ್ಷಣಿಕ ಸವಾಲುಗಳನ್ನು ಸಮಸ್ಯೆಗಳನ್ನು ಚರ್ಚಿಸಲು ಸಹಾಯವಾಗುತ್ತವೆ.

ಶಿಕ್ಷಣ ಕ್ಷೇತ್ರದ ಹೊಸ ಸವಾಲುಗಳನ್ನು ಪಠ್ಯಕ್ರಮದಲ್ಲಿನ ಬದಲಾವಣೆಯನ್ನು, ಪಠ್ಯಪುಸ್ತಕಗಳನ್ನು ರೂಪಿಸುವ ವಿಧಿವಿಧಾನಗಳನ್ನು ಮೌಲ್ಯಮಾಪನ ಕ್ರಿಯೆಯನ್ನು, ಇವುಗಳಲ್ಲಿ ನಕಾರಾತ್ಮಕ ಬದಲಾವಣೆಗಳಾದ ವೃತ್ತಿಪರರೆಲ್ಲರೂ ಧ್ವನಿ ಎತ್ತಬೇಕು. ವೃತ್ತಿ





ಸಂಘಗಳ ಸದಸ್ಯರಾಗುವುದರಿಂದ ವೃತ್ತಿ ಭಾಂದವರ ಅಂತಸ್ತು ಹೆಚ್ಚಬೇಕು. ವೃತ್ತಿಯಲ್ಲಿ ಕಾಳಜಿ ಬೆಳೆಯಬೇಕು, ವೃತ್ತಿಧರ್ಮವನ್ನು ಅರಿತುಕೊಳ್ಳಬೇಕು. ಇಂತಹ ಕಾರ್ಯವನ್ನು ಮಾಡುವಲ್ಲಿ ವೃತ್ತಿ ಸಂಘಗಳು ಯಶಸ್ವಿಯಾಗಿವೆ.

ಇವೆಲ್ಲದರ ಜೊತೆಗೆ ಶಿಕ್ಷಕ ಸಂಘಗಳ ಮಹತ್ತರವಾದ, ಗುರುತರವಾದ ಜವಾಬ್ದಾರಿಯೆಂದರೆ, ವೃತ್ತಿಯ ನಿಯಮಗಳನ್ನು ರೂಪಿಸುವುದು. ಆ ನಿಯಮಾವಳಿಗಳಿಗೆ ಎಲ್ಲಾ ಸದಸ್ಯರು ಬದ್ಧರಾಗಿರುವಂತೆ ಮಾಡುವುದು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಅನ್ಯಾಯಗಗಳಾದಾಗಲೆಲ್ಲಾ ವೃತ್ತಿಪರರು ಒಗ್ಗಟ್ಟಿನಿಂದ ಪ್ರತಿಭಟಿಸಬೇಕು. ಈ ರೀತಿ ವೃತ್ತಿಪರತೆ ಬೆಳೆಸಿಕೊಳ್ಳಲು ಅಡ್ಡಿಯುಂಟುಮಾಡುವ ಅಂಶಗಳೆಂದರೆ :

೧. ಶೈಕ್ಷಣಿಕ ಅಂಶಗಳ ಬಗ್ಗೆ ತೀರ್ಮಾನ ತೆಗೆದುಕೊಳ್ಳುವರು, ಕಾರ್ಯಾಂಗದ ಅಧಿಕಾರಿಗಳು, ಶಿಕ್ಷಕರಿಗೆ ಶೈಕ್ಷಣಿಕ ತೀರ್ಮಾನಗಳನ್ನು ತೆಗೆದುಕೊಳ್ಳಲು ಸ್ವತಂತ್ರವಿಲ್ಲ. ಅನೇಕ ವೇಳೆ ಅವರ ಅಭಿಪ್ರಾಯಗಳಿಗೆ ಮನ್ನಣೆ ಇರುವುದಿಲ್ಲ.

೨. ಶಿಕ್ಷಕರ ಬೋಧನೆಯನ್ನು ವೀಕ್ಷಿಸಿ, ಅದನ್ನು ಉತ್ತಮಪಡಿಸಲು..... ಕೊಡಬೇಕಾಗಿರುವ ಮೇಲ್ವಿಚಾರಣಾ ವರ್ಗಕ್ಕೆ ಸರಿಯಾದ ತರಬೇತಿ ಅನುಭವ ಇಲ್ಲದಿರುವುದು.

೩. ಶಿಕ್ಷಕರು ತಮ್ಮ ಸೇವಾಗುಣಮಟ್ಟವನ್ನು ಹೆಚ್ಚಿಸಿಕೊಳ್ಳಲು ಸರ್ಕಾರ ಇಲಾಖೆ ನಡೆಸುವ ಕಾರ್ಯಗಾರಗಳಲ್ಲಿ ಮತ್ತು ಪುನಶ್ಚೇತನ ಕಾರ್ಯಕ್ರಮದಲ್ಲಿ, ಬೋಧನೆಯ ಗುಣಮಟ್ಟ ಸುಧಾರಿಸಲು ಪ್ರಾಮಾಣಿಕ ಪ್ರಯತ್ನಗಳು ನಡೆಯುತ್ತಿಲ್ಲ.

ಈ ಎಲ್ಲಾ ಅಡೆತಡೆಗಳನ್ನು ನಿವಾರಿಸಿ, ವೃತ್ತಿಪರತೆಯನ್ನು ವೃದ್ಧಿಪಡಿಸಬೇಕಾದರೆ, ಶಿಕ್ಷಕ ವರ್ಗಕ್ಕೆ ವಿಷಯದ ಆಳವಾದ ಜ್ಞಾನದ ಜೊತೆಗೆ ಬೋಧನಾ ಪರಿಣತಿ ಇರಬೇಕು. ಮಿಗಿಲಾಗಿ ನಾನು ವಿದ್ಯಾರ್ಥಿಯೇ ಶಿಕ್ಷಕನಾಗಬೇಕೆಂಬ ಆಸಕ್ತಿ, ಮಾನಸಿಕ ಸಂಕಲ್ಪ ಇರಬೇಕು. ಸರ್ಕಾರ ಪ್ರಾರಂಭಿಸಿರುವ ಜನಮೆಚ್ಚಿದ ಶಿಕ್ಷಕ ಪ್ರಶಸ್ತಿಗೆ ಅರ್ಜಿಸಲ್ಲಿಸಿ ಬಹುಮಾನಗಳ ಪಡೆಯವ ಕಡೆ ಇರಬಾರದು. ವೃತ್ತಿಗೆ ಸೇರುವ ಶಿಕ್ಷಕರಿಗೆ, ಮಾನಸಿಕ ಸಿದ್ಧತೆ ಬೇಕಾಗುತ್ತದೆ. ಅದನ್ನು ಇಂಡಕ್ಷನ್ ಕಾರ್ಯಕ್ರಮ ನೆನಪಿಸಿಕೊಂಡು, ಇಂದಿನ ಶೈಕ್ಷಣಿಕ ಸವಾಲುಗಳ ಬಗ್ಗೆ ಮಾರ್ಗದರ್ಶನ ಮಾಡಬೇಕು. ಶಿಕ್ಷಕರು ಬೋಧನೆ ಮಾಡುವ ವಿಧಾನಗಳಿಗೆ, ಪ್ರಾಯೋಗಿಕ ಕಾರ್ಯಗಳಿಗೆ, ಕ್ರಿಯಾತ್ಮಕ ಸಂಶೋಧನೆಯ ಅಥವಾ ಸಂಶೋಧನೆಯ ಬುನಾದಿ ಇರಬೇಕು. ಶಿಕ್ಷಕರಲ್ಲಿ ವೃತ್ತಿಪರತೆಯನ್ನು ಹೆಚ್ಚಿಸಲು ಇಂತಹ ಪ್ರಯೋಗಾತ್ಮಕ ಕಾರ್ಯಗಳಿಗೆ ತೊಡಗಿ ಬೋಧನೆಯ ಗುಣಮಟ್ಟವನ್ನು ಹೆಚ್ಚಿಸುವ ಶಿಕ್ಷಕರಿಗೆ ಪುರಸ್ಕಾರಗಳನ್ನು ಕೊಡಬೇಕು. ಇದು ವಸ್ತುನಿಷ್ಠೆಯಿಂದ ಕೂಡಿದ್ದು, ನಿಜವಾದ ಅರ್ಹಜಾಣರನ್ನು ಈ ಪ್ರಶಸ್ತಿಗಳಿಗೆ ಮತ್ತು ಬಹುಮಾನಗಳಿಗೆ ಆಯ್ಕೆ ಮಾಡಬೇಕು.

ಇಂತಹ ಕ್ರಿಯಾಶೀಲ ಆಸಕ್ತಿಯುಳ್ಳ, ಒಳ್ಳೆಯ ಶೈಕ್ಷಣಿಕ ಮನೋಭಾವನೆಯುಳ್ಳ ಶಿಕ್ಷಕರನ್ನು ಪಠ್ಯಸೂಚಿಯ ರಚನೆ, ಪಠ್ಯವಸ್ತುವಿನ ತಯಾರಿಕೆ, ಪಠ್ಯಪುಸ್ತಕಗಳನ್ನು ರಚಿಸುವಿಕೆಗೆ ತೊಡಗಿಸಿ ಗುಣಾತ್ಮಕವಾಗಿ ಕೆಲಸಮಾಡಿಸಬೇಕು.

ಶಿಕ್ಷಕರನ್ನು ಶಾಲೆಗಳಲ್ಲಿ, ಶೈಕ್ಷಣಿಕ ಕಾರ್ಯಕ್ಕೆ ಮಾತ್ರ ಸಂಪೂರ್ಣವಾಗಿ ತೊಡಗಿಸಬೇಕು. ಇತರೆ ಕಾರ್ಯಗಳಾದ, ಜನಗಣತಿ, ಪ್ರಾಥಮಿಕ ಶಾಲೆಗಳ ದಾಖಲಾತಿ ಸಮೀಕ್ಷೆ, ಜಾನುವಾರುಗಳ ದಾಖಲಾತಿ ಮತ್ತು ಚುನಾವಣಾ ಕಾರ್ಯಗಳಿಗೆ ತೊಡಗಿಸಬಾರದು. ಈ ಕಾರ್ಯಗಳಲ್ಲಿ ತೊಡಗಿಸಿದರೆ ಅವರ ಮಾನಸಿಕ ಸ್ಥೈರ್ಯ ಕುಗ್ಗುತ್ತದೆ. ಶೈಕ್ಷಣಿಕ ಕಾಳಜಿ ಮಾಯವಾಗುತ್ತದೆ. ಶಾಲೆಗಳಲ್ಲಿ ವಿದ್ಯಾರ್ಥಿಗಳ ಕಲಿಕೆ ಕುಂಠಿತವಾಗುತ್ತದೆ.

ವೃತ್ತಿಪರರ ಕೆಲಸ ಮಾಪನ ಮಾಡುವ ವಿಧಿವಿಧಾನಗಳಾವುವು? ಶಿಕ್ಷಕರು ವೃತ್ತಿಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡರೆ ತಮ್ಮ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿಗೆ ಸತತವಾಗಿ ಸಂಪೂರ್ಣವಾಗಿ ದುಡಿಯುತ್ತಾರೆ. ಜೊತೆಗೆ ಅವರು ಹೊಸ ಆವಿಷ್ಕಾರಗಳನ್ನು ಹುಡುಕಿ ತರಗತಿಗಳಲ್ಲಿ ಅವುಗಳನ್ನು ಅಳವಡಿಸಿ ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಉತ್ತಮ ಶಿಕ್ಷಕರೆನಿಸಿಕೊಂಡು ಕೆಲಸದಲ್ಲಿ ತೊಡಗುತ್ತಾರೆ. ಅಂತಹ ಶಿಕ್ಷಕರಿಗೆ ಸರ್ಕಾರ ಕೊಡುವ ಬಹುಮಾನಗಳಿಗಾಗಲೀ ಅಥವಾ ಇಲಾಖೆ ಕೊಡುವ ಪುರಸ್ಕಾರದ ಕಡೆಯಾಗಲಿ ಗಮನವಿರುವುದಿಲ್ಲ. ಅದು ಅವರಿಗೆ ಬೇಕಿರುವುದೂ ಇಲ್ಲ.

ಆದರೂ ಶಿಕ್ಷಕರ ದಿನಾಚರಣೆ ಸಂದರ್ಭಗಳಲ್ಲಿ ಸರ್ಕಾರ ಜನಮೆಚ್ಚಿದ ಶಿಕ್ಷಕರಿಗೆ ಮತ್ತು ಇತರೆ ಶಿಕ್ಷಕರಿಗೆ ಪುರಸ್ಕಾರಗಳನ್ನು ಕೊಡುವಾಗ, ವೃತ್ತಿಪರರನ್ನು ಅವರು ಕೆಲಸ ಮತ್ತು ಶೈಕ್ಷಣಿಕ ಆಸಕ್ತಿಯನ್ನು ಪತ್ತೆಮಾಡಿ ನೀಡಿದಾಗ ಮಾತ್ರ ಶಿಕ್ಷಕರ ದಿನಾಚರಣೆಯ ಔಚಿತ್ಯ ಉಳಿಯುತ್ತದೆ. ಆದರೆ ಇಂದೂ ಕೂಡ ಅವರು ಪ್ರಸ್ತುತಪಡಿಸುವ ದಾಖಲೆಗಳ ಆಧಾರದ ಮೇಲೆ ಪುರಸ್ಕಾರಗಳನ್ನು ಕೊಟ್ಟು ಗೌರವಿಸಿದರೆ ಶಿಕ್ಷಕ ದಿನಾಚರಣೆ ಔಚಿತ್ಯಪೂರ್ಣವಾಗುವುದಿಲ್ಲ. ರಾಷ್ಟ್ರಕಟ್ಟುವ ಕೆಲಸದಲ್ಲಿ ತೊಡಗಿರುವ ಮಂದಿಯನ್ನು ಒಂದು ದಿವಸ ನೆನೆದು ೩೬೪ ದಿವಸಗಳು ಮರೆಯವುದು ಬೇಡ. ರಾಷ್ಟ್ರದ ಶಕ್ತಿ ಶಿಕ್ಷಕರು ಎಂದು ಭರವಸೆ ಇಡಬೇಕು.

★

# ವಚನಗಳ ವಿಶ್ಲೇಷಣೆ

– ಸಂ. ಡಾ. ಎಲ್. ಬಸವರಾಜು
ವಿಶ್ರಾಂತ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು.

*ಎರೆದರೆ ನೆನೆಯದು ! ಮರೆದರೆ ಬಾಡದು !!*
*ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ ನೋಡಯ್ಯ !*
*ಕೂಡಲ ಸಂಗಮದೇವಯ್ಯ*
*ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು !*

ಜಂಗಮಲಿಂಗಸ್ವರೂಪಿಯಾದ ಲೋಕದ ಸೇವೆಗೆ ತನುವನ್ನು ತೇಯದೆ, ಧನವನ್ನು ಈಯದೆ, ಕಲ್ಲಿನ ಲಿಂಗಕ್ಕೆ ನಿತ್ಯಾಭಿಷೇಕ ಮಾಡಿದರೇನು ಪ್ರಯೋಜನ? ಸತ್ಯಲೋಕಕ್ಕೆ ನಿತ್ಯ ದಾಸೋಹಮಾಡದೆ, ಕಲ್ಲಿನ ಲಿಂಗಕ್ಕೆ ಸಲ್ಲಿಸುವ ಪೂಜೆಗೆ ಬಸವಣ್ಣನವರು ಮಾನ್ಯತೆಯನ್ನು ಕೊಡಲಿಲ್ಲ. ಎಷ್ಟು ನೀರೆರದರೂ ನೆನೆಯದ, ಒಂದು ಪಕ್ಷ ಮರೆತರೆ ಬಾಡದ, ಲಿಂಗಾರ್ಚನೆ ಹುರುಳಿಲ್ಲವೆಂದು ದಿಟ್ಟತನದಿಂದ ಟೀಕಿಸಿ, ಜೀವಕೋಟಿಯನ್ನು ತಣಿಸಿದಲ್ಲದೆ ಲಿಂಗದೇವನು ನೆನೆಯುವುದಿಲ್ಲವೆಂದು ಮಾರ್ಮಿಕವಾಗಿ ಆಡಿರುವರು.

ಮಾಡಿದುದನ್ನು ನೆನೆಯುವ, ಮರೆತರೆ ಮರುಗುವ ಈ ಜೀವಲೋಕವಾದರೋ ಅನ್ನ-ನೀರು-ವಸ್ತ್ರ-ವಸತಿಗಾಗಿ, ಅರಿವು ಆರೋಗ್ಯಗಳಿಗಾಗಿ ಹಾಹಾಕಾರವೆತ್ತಿರುವಲ್ಲಿ, ಅದರ ಅಭಿವೃದ್ಧಿಗಾಗಿ ನಿನ್ನ ಮನವನ್ನು ಮುಡುಪಿಡು, ಧನವನ್ನು ನಿಧಿಯಾಗಿಡು, ಅದರ ಕಲ್ಯಾಣಕ್ಕಾಗಿ ದುಡಿ, ದುಡಿದುಡಿದು ಹಣ್ಣಾಗಿ ಅದಕ್ಕಾಯೇ ಮಡಿ, ಈ ಲೋಕಾರಾಧನೆಯೇ ಶಿವಾರಾಧನೆ – ಎಂದು ಸಾರಿ ಹೇಳಿ, ಕರ್ಮಜಡ ಧರ್ಮಕ್ಕೆ ರಚನಾತ್ಮಕ ಕ್ರಿಯಾಶೀಲದ ಹೊಸ ತಿರುವನ್ನು ಕೊಟ್ಟವರೆಂದರೆ ಬಸವಣ್ಣನವರು. ಅವರ ಪ್ರಕಾರ ದೇವರು ಮೂಲಮೂರ್ತಿಯಾದರೆ ಲೋಕವು ಅದರ ಉತ್ಸವಮೂರ್ತಿ – ಅದನ್ನು ಅಲಂಕರಿಸಬೇಕು, ಅದನ್ನು ಮೆರೆಸಬೇಕು. ಆಗಲೇ ಮೂಲಮೂರ್ತಿಗೆ ಪ್ರೀತಿ.

*ಕಲ್ಲನಾಗರ ಕಂಡರೆ ಹಾಲನೆರೆ ಎಂಬರು !*
*ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ !*
*ಉಂಬ ಜಂಗಮ ಬಂದರೆ ನಡೆ ಎಂಬರು !*
*ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ !*
*ನಮ್ಮ ಕೂಡಲಸಂಗನ ಶರಣರ ಕಂಡು*
*ಉದಾಸೀನವ ಮಾಡಿದರೆ*
*ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯ !*

ಲಿಂಗಾರ್ಪಿತ ಮಾಡಿ ತಾವು ಕೈಯಿಟ್ಟ ತಳಿಗೆಯ ಅನ್ನದಲ್ಲಿ ಒಂದು ತುತ್ತನ್ನೆತ್ತಿ, ಹಸಿದು ಬಂದು ಬೇಡಿದ ನಿರ್ಗತಿಕನಿಗೆ ನೀಡುವುದಿಲ್ಲ. ಹಸಿಯದ, ಬೇಡದ, ತಿನ್ನದ ಕಲ್ಲಿನ ಲಿಂಗಕ್ಕೆ ಉಣ್ಣೆಂದು ಬಗೆಬಗೆಯ ಉಣಿಸನ್ನು ಅದರ ಮೂತಿಗೇ ಒಡ್ಡುವರು. ನಿಜವಿಲ್ಲದ ಈ ಜನರ ಮರುಳಾಟವನ್ನೂ ಕಳ್ಳಾಟವನ್ನೂ ಕಂಡು – ಕಲ್ಲನಾಗರಿಗೆ ಹಾಲನ್ನೆರೆಯುತ್ತ, ನಿಜವಾದ ಹಾವನ್ನು ಕಂಡು ಕಲ್ಲು-ಕೋಲೆಂದು ಕೊಲ್ಲಲು ಕೂಗಾಡುವ ಜನರ ವಿಪರ್ಯಾಸದೊಡನೆ ಅದನ್ನು ಹೋಲಿಸಿ, ಉಪಹಾಸ ಮಾಡಿರುವರು ಬಸವಣ್ಣನವರು. ಶಿವನನ್ನೇ ಉದಾಸೀನ ಮಾಡಿದರೂ – ಅದನ್ನು ಶಿವನು ಸಹಿಸಿಯಾನು, ಆದರೆ ಶಿವಶರಣರಿಗೆ ಉದಾಸೀನಮಾಡಿದರೆ ಶಿವ ಸಹಿಸನೆಂದು ಎಚ್ಚರಿಸಿರುವರು – ಅವರು.

ಸುಳ್ಳಿಗೆ ಸೂರೆಗೊಟ್ಟು, ಸತ್ಯಕ್ಕೆ ಮೋರೆ ಮುರಿಯುವ ಭೂತಾಟದ ಜನ ಈ ಮಾತನ್ನು ಮರೆಯದಿರಲಿ.

*ದ್ವೈತಾದ್ವೈತವನೋದಿ ಏನ ಮಾಡುವಿರಯ್ಯ?*
*ನಮ್ಮ (ಶರಣರಿಗೆ ಉರಿಗರಗಾಗಿ) ಕರಗದನ್ನಕ್ಕ?*
*ಸ್ಥಾವರ-ಜಂಗಮ ಒಂದೇ ಎಂದು ನಂಬದನ್ನಕ್ಕ?*
*ಕೂಡಲಸಂಗಮದೇವ,*
*ಬರಿಯ ಮಾತಿನ ಮಾಲೆಯಲೇನಹುದು?!*

ದ್ವೈತವನ್ನು ಓದಿ ದೇವರೇ ಬೇರೆ, ಈ ಜಗತ್ತೇ ಬೇರೆ ಎನ್ನುವುದಾಗಲಿ; ಬಸವಣ್ಣನವರಿಗೆ ಹಿಡಿಸದು. ದ್ವೈತಾದ್ವೈತಗಳು ಸಮ್ಮೇಳಗೊಂಡ ಲಿಂಗಾಯತಧರ್ಮದ ಪ್ರಕಾರ – ದೇವರೂ ಸತ್ಯ, ಈ ಲೋಕವು ಸತ್ಯ. ಅಷ್ಟೇ ಅಲ್ಲ; ದೇವರೂ ಈ ಲೋಕವೂ ಸಮಾನ-ಸತ್ಯ ಮತ್ತು ಸೇವ್ಯ. ಅದನ್ನೇ ಈ ವಚನದಲ್ಲಿ ಬಸವಣ್ಣನವರು ಸ್ಪಷ್ಟಪಡಿಸಿರುವರು. ಈ ಉದಾತ್ತ ಸತ್ಯದ ಸಂವೇದನೆಯಿಲ್ಲದೆ ದ್ವೈತ-ಅದ್ವೈತವೆಂದು ಓದು-ವಾದಗಳಲ್ಲಿ ತೊಡಗಿದ್ದು ಪ್ರಯೋಜನವೇನು? ಅದಕ್ಕಿಂತ ಶರಣರ ಸಂದೇಶಕ್ಕೆ ಮಣಿದು, ಜಗತ್ತನ್ನೇ ಜಗದೀಶನೆಂದು ಭಾವಿಸಿ ಸೇವಾ ಮನೋಭಾವದಿಂದ ದುಡಿದರೆ ಜನ್ಮ ಸಾರ್ಥಕವಾಗುವುದು.

*ನಾಳೆ ಬಪ್ಪುದು ನಮಗಿಂದೇ ಬರಲಿ*
*ಇಂದು ಬಪ್ಪುದು ನಮಗೀಗಲೇ ಬರಲಿ !*
*ಇದಕಾರಂಜುವರು? ಇದಕಾರಳುಕುವರು?*
*'ಜಾತಸ್ಯ ಮರಣಂ ಧ್ರುವಂ' ಎಂದುದಾಗಿ*
*ಕೂಡಲಸಂಗಮದೇವ,*
*ತಪ್ಪಿಸುವಡೆ ಹರಿ ಬ್ರಹ್ಮಾದಿಗಳಿಗಳವಲ್ಲ !*

*ಲೇಸೆನಿಸಿಕೊಂಡು ಐದು ದಿನ ಬದುಕಿದರೇನು?*
*ಲೇಸೆನಿಕೊಂಡು ನಾಲ್ಕು ದಿನ ಬದುಕಿದರೇನು?*
*ಲೇಸೆನಿಕೊಂಡು ಮೂರು ದಿನ ಬದುಕಿದರೇನು?*
*ಲೇಸೆನಿಕೊಂಡು ಎರಡು ದಿನ ಬದುಕಿದರೇನು?*
*ಲೇಸೆನಿಕೊಂಡು ಒಂದು ದಿನ ಬದುಕಿದರೇನು?*

*ಗ್ರಂಥ :*
*ಜೀವಿತಂ ಶಿವಭಕ್ತಾನಾಂ ವರಂ ಪಂಚ ದಿನಾನಿ ಚ*
*ನಾಜಕಲ್ಪ ಸಹಸ್ರಂ ಚ ಭಕ್ತಹೀನಂ ತು ಶಂಕರಿ ॥*
*ಎಂದುದಾಗಿ*
*ಕೂಡಲಸಂಗನ ಶರಣರ ವಚನದಲ್ಲಿ ಲೇಸೆನಿಕೊಂಡು*
*ಒಂದು ದಿನ ಬದುಕಿದರೆ ಸಾಕು !*

ಸಜ್ಜನರಿಗೆ ಜಿಗುಪ್ಸೆ ತರುವ (ತರವಲ್ಲದ) ಜೀವನವನ್ನು ಅಜಕಲ್ಪ ಸಹಸ್ರವರ್ಷಪರ್ಯಂತ ಜೀವಿಸಿದರೇನು? ಆ ಸಜ್ಜನರಿಂದ ಸೈಯೆನಿಸಿಕೊಂಡು ಒಂದು ಕೈಯ ಬೆರಳ ಮೇಲೆ ಎಣಿಸುವಷ್ಟು ದಿನ ಬದುಕಿದರೂ ಸಾಕು ! ಪರಹಿಂಸಕದೀರ್ಘಜೀವನದಿಂದ ಕೇವಲ ಲೋಕಪೀಡೆ. ಪರಾರ್ಥ-ಸಮರ್ಪಿತವಾದ ಬಾಳು ಅಲ್ಪಾವಧಿಯದಾದರೂ ಅಮರವೆನಿಸೀತು.

*(ಕೃಪೆ : ಬಸವ ವಚನಾಮೃತ)*





# ಶಿಕ್ಷಣ : ಒಂದು ಚಿಂತನೆ

– ಎಸ್. ರವಿಶಂಕರ್
ಶಿವನಿಲಯ, ಆಟೋ ನಿಲ್ದಾಣ ಹತ್ತಿರ
ಉಪ್ಪಾರಹಳ್ಳಿ, ತುಮಕೂರು – ೫೭೨೧೦೨

ಕಳೆದ ೭-೮ ವರ್ಷಗಳಲ್ಲಿ ಪ್ರಪಂಚ ಅತಿವೇಗವಾಗಿ ಬೆಳವಣಿಗೆಯಾಗುತ್ತಿದೆ. ಹಿಂದಿನ ४-೫ ದಶಕಗಳಿಗೆ ಹೋಲಿಸಿದಾಗ ಈ ಬೆಳವಣಿಗೆ ಕ್ಷಿಪ್ರವಾದುದಾಗಿದೆ. ೨೦ನೇ ಶತಮಾನದಲ್ಲಿ ವಿದ್ಯುಚ್ಛಕ್ತಿಯ ಆವಿಷ್ಕಾರ ವಿಶ್ವದ ಉನ್ನತಮಟ್ಟದಲ್ಲಿ ಕ್ರಾಂತಿಯನ್ನು ಉಂಟು ಮಾಡಿತ್ತು. ಮಾಹಿತಿ ತಂತ್ರಜ್ಞಾನ ಮತ್ತು ಸಂವಹನ ತಂತ್ರಜ್ಞಾನಗಳ ಬೆಳವಣಿಗೆಯೂ ಸಹ ವಿದ್ಯುಚ್ಛಕ್ತಿಯ ಆವಿಷ್ಕಾರದಂತೆಯೇ ಪ್ರಬಲವಾದ ಪರಿಣಾಮವನ್ನು ಬೀರಿವೆ. ಮಾಹಿತಿ ಮತ್ತು ಸಂವಹನ ತಂತ್ರಜ್ಞಾನಗಳು ಬದಲಾಗುತ್ತಿರುವ ಪ್ರಪಂಚದ ಮೂಲರೂಪವನ್ನು ಮಾರ್ಪಾಟು ಮಾಡುವಲ್ಲಿ ಗಮನಾರ್ಹವಾದ ಪಾತ್ರವಹಿಸುತ್ತಿವೆ.

ಭೂಮಂಡಲದ ಕ್ರಿಯಾವ್ಯವಸ್ಥೆಯೇ ಬದಲಾವಣೆ ಒಳಪಟ್ಟಿದೆ. ಬದಲಾವಣೆಯ ಮೇಲೆ ಪ್ರಭಾವ ಬೀರಿರುವ ಅಂಶಗಳೆಂದರೆ ಜನಜೀವನದ ಮೇಲೆ ವಿಜ್ಞಾನ ಮತ್ತು ತಂತ್ರಜ್ಞಾನಗಳ ಪ್ರಬಲವಾದ ಹಿಡಿತ ಮತ್ತು ಅವುಗಳ ಸ್ವಭಾವ ಕೈಗಾರಿಕೆಗಳ ಪುನರ್‌ರಚನೆ ಮತ್ತು ಆಧುನಿಕತೆ ದೂರದರ್ಶನ ಮತ್ತು ಇತರೆ ಮಾಧ್ಯಮಗಳ ಪ್ರಭಾವ ಜನರ ವೈಯಕ್ತಿಕ ವೃತ್ತಿಗಳಲ್ಲಿ ಕಂಡುಬರುವ ತಾತ್ವಿಕ ಮತ್ತು ಭೌತಿಕ ಬದಲಾವಣೆಗಳು, ವೈಯಕ್ತಿಕ ನಿಷ್ಠೆ ಮತ್ತು ಗಮನ ಪರಿಸರಾತ್ಮಕ ಪ್ರಚೋದನೆಗಳು, ಜನಸಂಖ್ಯಾ ಸ್ಫೋಟ ಇವು ಪ್ರಮುಖವಾಗಿವೆ.

ಹೊಸ ಸಹಸ್ರಮಾನದಲ್ಲಿ ಸಾಮಾಜಿಕ ಬೆಳವಣಿಗೆಗಳು ಅತ್ಯಂತ ಆಶ್ಚರ್ಯಕರ ರೀತಿಯಲ್ಲಿ ಉಂಟಾಗುತ್ತಿವೆ. ಸಾಂಪ್ರದಾಯಿಕವಾದ ಹಿಂದಿನ ರೀತಿ ನಿಯಮಗಳು ಮೂಲರೂಪಗಳಲ್ಲಿ ರೂಪಾಂತರ ಆಗುತ್ತಿವೆ ಎಂಬುದನ್ನು ಯಾರೂ ಅಲ್ಲಗಳೆಯಲಾರರು. ನಮ್ಮ ಇಂದಿನ ಮಕ್ಕಳಿಗೆ ೫೦ರ ದಶಕದಂತೆಯೇ ನೀಡುತ್ತಿರುವ ಶಿಕ್ಷಣದಿಂದ ಇವೆಲ್ಲವೂ ಸಾಧ್ಯವಾಗುವುದಿಲ್ಲ. ಏಕೆಂದರೆ ಇವ್ಯಾವೂ ಮುಂದಿನ ಭವಿಷ್ಯದ ಜೀವನದಲ್ಲಿ ಅವರ ಬುದ್ಧಿಮಟ್ಟವನ್ನು ಉನ್ನತ ಮಟ್ಟಕ್ಕೇರಿಸಲು ಸಾಧ್ಯವಾಗುವುದೇ ಇಲ್ಲ.

ಬದಲಾವಣೆಯ ಕ್ಷಿಪ್ರಗತಿಯಲ್ಲಿರುವ ಪ್ರಪಂಚದಲ್ಲಿ ಯಾವ ವ್ಯಕ್ತಿ, ಸಂಘ, ಸಂಸ್ಥೆ ಅಥವಾ ದೇಶ ಸುಮ್ಮನೇ ಒಂದೇ ರೀತಿಯಲ್ಲಿ ಅಥವಾ ಹಿಂದಿನ ರೀತಿಯಲ್ಲಿಯೇ ಕಾರ್ಯನಿರ್ವಹಿಸಿದಲ್ಲಿ ಅದು ವಿಫಲವಾಗುತ್ತದೆ. ಅಷ್ಟೇ ಅಲ್ಲ ಯಾವುದೇ ಉದ್ದೇಶವನ್ನು ಸಾಧಿಸಲು ಸಾಧ್ಯವಾಗುವುದಿಲ್ಲ. ಭವಿಷ್ಯದ ಸವಾಲಿನ ಸಮಾಜದೆಡೆಗೆ ಸಾಗಬೇಕಾದ ನಾವು ಯೋಜಿತ ರೀತಿಯಲ್ಲಿ ಉಪಾಯಗಳನ್ನು ತಂತ್ರಗಳನ್ನು ಕಲಿಯಬೇಕಾದ ಅವಶ್ಯಕತೆ ಇದೆ. ಇಲ್ಲದೇ ಇದ್ದರೆ ಈಗಿರುವ ಸಾಮಾಜಿಕ ಸಮಸ್ಯೆಗಳ ಸುಳಿಯಲ್ಲಿಯೇ ಇರಬೇಕಾಗುತ್ತದೆ.

ಮುಂದೆ ಆಗಬಹುದಾದ ಬದಲಾವಣೆಗಳಿಗೆ ಹೊಂದಿ ಕೊಳ್ಳಲು ಅನುಕೂಲವಾಗುವಂತೆ ಕೌಶಲ್ಯಗಳನ್ನು ಈಗಲೇ ಬೆಳೆಸಿಕೊಳ್ಳಬೇಕಾದ ಅನಿವಾರ್ಯತೆ ನಮ್ಮದಾಗಬೇಕಾಗಿದೆ. ಕಲ್ಪನೆ ಮಾಡಲು ಸಾಧ್ಯವಾಗುವಂತೆ ನಡವಳಿಕೆಗಳನ್ನು ವರ್ಧಿಸ ಬಹುದಾದ ಅವಶ್ಯಕತೆಯಿದೆ. ನಮಗೆ ಈಗಿರುವ ಸಮರ್ಥತೆಗಳನ್ನು ಸಂರಕ್ಷಣೆ ಮಾಡಿಕೊಳ್ಳುವ ಜೊತೆಯಲ್ಲಿಯೇ ಮುಂದಿನ ನಡವಳಿಕೆಗಳನ್ನು ಮಾನವೀಯ ಮೌಲ್ಯಗಳನ್ನು ಮತ್ತು ನೈತಿಕತೆಯನ್ನೂ ಬೆಳೆಸುವ ಅಗತ್ಯವಿದೆ.

ಮುಂದಿನ ಜನಾಂಗದಲ್ಲಿ ನೈತಿಕತೆಯನ್ನು ಉನ್ನತ ಮಟ್ಟಕ್ಕೆ ಬದಲಾಯಿಸುವುದಾದರೂ ಹೇಗೆ? ಶಾಲಾ ತರಗತಿಗಳಲ್ಲಿ ಯಾವಾಗಲೂ ನಿಶ್ಚಿಂತೆಯಿಂದ ಕೂಡಿರುವ ವಾತಾವರಣವನ್ನು ಆಶ್ಚರ್ಯಕರವಾದ ಮತ್ತು ಕುತೂಹಲಕಾರಿ ವಿಷಯಗಳಿಂದ ಬದಲಾಯಿಸಬೇಕಾದ ಅವಶ್ಯಕತೆ ಇದೆ. ಮಕ್ಕಳಲ್ಲಿ ಪ್ರಶ್ನೆಯನ್ನು ಕೇಳುವ ಪ್ರವೃತ್ತಿಯನ್ನು ಬೆಳೆಸಬೇಕಾದ ಅನಿವಾರ್ಯತೆ ಇದೆ. ಪ್ರಶ್ನೆಗಳು ಮಕ್ಕಳ ಆಲೋಚನಾ ಕ್ರಮದಿಂದ ಹೊರಬೀಳುವುದರಿಂದ ಅವರಲ್ಲಿನ ಸುಪ್ತ ಆಸಕ್ತಿಯನ್ನು ಜಾಗೃತಗೊಳಿಸುವುದಲ್ಲದೇ ಕಲಿಕೆಗೆ ಪ್ರೇರಣೆಯನ್ನು ಉಂಟು ಮಾಡಬಹುದಾಗಿದೆ. ಮಕ್ಕಳ ಕೊರಳಿಗೆ ಪಠ್ಯಪುಸ್ತಕಗಳನ್ನು ಹೇರುವ ಬದಲಾಗಿ ನೈಜ ಪ್ರಪಂಚದಲ್ಲಿನ ಸಮಸ್ಯೆಗಳು, ಎದುರಿಸ ಬೇಕಾದ ಸವಾಲುಗಳು, ಮತ್ತು ವಾಸ್ತವಿಕ ಅಂಶಗಳ ಅನುಭವಗಳನ್ನು ನೀಡಬೇಕಾಗಿದೆ. ಶಾಲಾ ತರಗತಿಯೇ ಪ್ರಪಂಚ ಎಂಬ ಪದಕ್ಕೆ ಬದಲಾಗಿ ಪ್ರಪಂಚವೇ ಶಾಲಾ ತರಗತಿ ಎಂಬ ಮೂಲಕಲ್ಪನೆಯನ್ನು ಶಾಲೆಗಳಲ್ಲಿ ತರಬೇಕಾದ ತುರ್ತು ಅಗತ್ಯವಿದೆ.

ಇಲ್ಲಿಯವರೆಗೂ ರೂಢಿಗತವಾಗಿ ಸಾಗುತ್ತಿರುವ ಶಾಲಾಕಾರ್ಯ ಕ್ರಮಗಳಲ್ಲಿ ಈ ರೀತಿಯ ಮಹತ್ತರವಾದ ವಿಷಯಗಳ ಪರಿಕಲ್ಪನೆಗಳನ್ನು ಶಾಲೆಗಳಲ್ಲಿ ತರಬೇಕಾದ ಪ್ರಯತ್ನ ಬಹಳ ಕಷ್ಟಕರವಾದುದು. ಏಕೆಂದರೆ ಇದೊಂದು ಹೊಸ ಅನುಭವವನ್ನು ಪರಿಚಯಿಸುವ ಪ್ರಯತ್ನವಾಗಿದೆ. ಶೀಘ್ರ ಅಭಿವೃದ್ಧಿಯತ್ತ ನಡೆಯುವ ಈ ಪರಿಸ್ಥಿತಿ ಸಾಮಾನ್ಯ ವಾದ ಪ್ರಸ್ತುತ ವ್ಯವಸ್ಥೆಗೆ ಕಾಲ್ಪನಿಕವಾದದ್ದಾಗಿದೆ. ಇವೆಲ್ಲವೂ ರೂಢಿಗತವಾದ ರೀತಿಯನ್ನು ಮೀರಬೇಕಾದುದು ಸಹಜವೇ ಆಗಿದೆ.

ಸಮಾಜ ಹೊಂದುತ್ತಿರುವ ಬದಲಾವಣೆಗಳಿಗೆ ಅನುಗುಣವಾಗಿ ಶಾಲೆಗಳೂ ಬದಲಾಗಬೇಕಾದ ಅಗತ್ಯವಿದೆ. ಶಾಲೆಗಳಲ್ಲಿ ಆಗಬೇಕಾದ ಮೂಲ ಬದಲಾವಣೆಗಳೆಂದರೆ, ಕಲಿಕಾ ದೃಷ್ಟಿಕೋನ, ಸಾಧನೀಯ ಗುರಿಗಳು, ಪಠ್ಯಕ್ರಮ, ಪರಿವಿಡಿ, ಬೋಧನಾ ವಿಧಾನಗಳು, ಕಲಿಕೆಯ ಅಂಶಗಳು ಮತ್ತು ಮೌಲ್ಯಮಾಪನ. ಶಾಲೆಗಳಲ್ಲಿ ಮಕ್ಕಳು ಕಲಿಯುತ್ತಿರುವ ಸ್ಥಳದಿಂದ ಮುಂದಿನ ಹೊಸ ವಿಷಯಗಳನ್ನು ಕಲಿಯುವಂತೆ ಕಲಿಕೆಯ

ಕ್ರಮಗಳನ್ನು ಬದಲಾಯಿಸಬೇಕು. ಹೊಸ ವಿಷಯಗಳನ್ನು ಕಲಿಯುವುದು ಹೇಗೆ ಎಂಬ ವಿಧಾನಗಳನ್ನು ಸಹ ಪರಿಚಯಿಸಬೇಕಾಗಿದೆ. ಹಾಗಾಗಿ ವಿಷಯ ಕೇಂದ್ರಿತ ಬೋಧನೆಯನ್ನು ಪ್ರಕ್ರಿಯಾತ್ಮಕ ಕಲಿಕೆಯೆಡೆಗೆ ಬದಲಾಯಿಸಬೇಕಾಗಿದೆ. ಶಾಲೆಗಳು ಸಾಂಪ್ರದಾಯಿಕವಾಗಿ ಶಿಕ್ಷಣ ಕೇಂದ್ರಿತವಾಗಿವೆ. ಸರಿಯಾದ ಸ್ಪಷ್ಟ ಉತ್ತರಗಳು, ಸಿದ್ಧ ಕಾರ್ಯಮಾದರಿಗಳು ಮತ್ತು ಶಿಕ್ಷಕರಿಂದ ಮಕ್ಕಳಿಗೆ ಜ್ಞಾನದ ಬದಲಾವಣೆಗೆ ಮಾತ್ರ ಯುಕ್ತವಾಗಿವೆಯಾದರೂ ವೈಯಕ್ತಿಕವಾದ ಗಮನ ನೀಡುವಲ್ಲಿ ಸಂಪೂರ್ಣವಾಗಿ ವಿಫಲವಾಗುತ್ತವೆ ಎನ್ನಬಹುದು.

ಬೋಧನೆಗಿಂತ ಕಲಿಕೆಗೇ ಹೆಚ್ಚು ಒತ್ತು ನೀಡಿದಲ್ಲಿ ವಿಧಾನಗಳು ಬದಲಾಗಬಹುದು. ಆಗ ಶೈಕ್ಷಣಿಕ ಪ್ರಕ್ರಿಯೆಯಲ್ಲಿ ಮಕ್ಕಳೇ ಪ್ರಧಾನವಾಗುತ್ತಾರೆ. ಅಷ್ಟೇ ಅಲ್ಲ ಕಲಿಕೆಯ ಪ್ರಕ್ರಿಯೆಯಲ್ಲಿ ಮಕ್ಕಳೇ ಕೇಂದ್ರವಾಗುತ್ತಾರೆ. ಹಾಗಾಗಿ ಇಲ್ಲಿಯವರೆಗೆ ಸಾಂಪ್ರದಾಯಿಕವಾಗಿದ್ದ ರೀತಿಯಿಂದ ಬದಲಾಗಬೇಕಾದ ತುರ್ತು ಅನಿವಾರ್ಯತೆ ಇದಾಗಿದೆ.

ಈ ರೀತಿಯ ಬದಲಾವಣೆ ಆಗಬೇಕಾದರೆ ಶಿಕ್ಷಕರ ಪಾತ್ರ ಮಹತ್ವದ್ದಾಗಿದೆ. ೨೧ನೇ ಶತಮಾನದಲ್ಲಿ ಶಿಕ್ಷಕ ಶಿಕ್ಷಣ ಶಾಸ್ತ್ರ ವಿಜ್ಞಾನಶಾಸ್ತ್ರ ಶೈಕ್ಷಣಿಕ ಆಡಳಿತ ಕೌಶಲ್ಯಗಳು, ಸಾಂಸ್ಕೃತಿಕ ಹಾಗೂ ತಂತ್ರಜ್ಞಾನ ಕೌಶಲ್ಯಗಳನ್ನು ಬೆಳೆಸಿಕೊಳ್ಳುವುದರೊಂದಿಗೆ ಅವುಗಳಲ್ಲಿ ನೈಪುಣ್ಯತೆಯನ್ನು ಸಹ ಹೊಂದಿರಬೇಕು. ಶಿಕ್ಷಕ ಮಕ್ಕಳ ಕಲಿಕೆಗೆ ಸಹಾಯಕನಾಗಿರಬೇಕು, ಜ್ಞಾನಕ್ಕೂ ಮಕ್ಕಳಿಗೂ ನಡುವಿನ ಸೇತುವೆಯಾಗಿರ ಬೇಕು, ಸಲಹೆಗಾರ – ಉಪದೇಶಕನಾಗಿರಬೇಕು. ಬೋಧನೆ, ಕಲಿಕೆ ಮತ್ತು ಶಿಕ್ಷಕ ಇವು ಬದಲಾಗುತ್ತಿರುವ ಶೈಕ್ಷಣಿಕ ಕ್ಷೇತ್ರದ ಕ್ರಿಯಾತ್ಮಕ ವ್ಯವಸ್ಥೆಯಲ್ಲಿ ಮೂಲ ಕಲ್ಪನೆಗಳು. ಉತ್ತಮ ಶಿಕ್ಷಕ ಆಲೋಚನಾ ಕ್ರಮ, ತಂತ್ರಜ್ಞಾನ ಕೌಶಲ್ಯಗಳಲ್ಲಿ ಪರಿಣಾಮಕಾರಿ ತರಬೇತಿ ಹೊಂದುವುದು ಅಗತ್ಯವಿದೆ. ನೈತಿಕತೆಯ ಅನುಭೂತಿಕ ಶಕ್ತಿಯೇ ಶೈಕ್ಷಣಿಕ ಕ್ಷೇತ್ರದ ದಾರಿದೀಪ ಎಂಬ ಅರಿವು ಶಿಕ್ಷಕನದಾಗಬೇಕು.

ಅಂತರಾಷ್ಟ್ರೀಯ ಮಟ್ಟದ ಸಂಶೋಧನೆಯ ಪ್ರಕಾರ ಶಾಲೆಗಳಲ್ಲಿ ಸಹ ಪಠ್ಯೇತರ ಮತ್ತು ಪರಿಣಾಮಕಾರಿ ಶೈಕ್ಷಣಿಕ ತಂತ್ರಜ್ಞಾನಕ್ಕೆ ಶೇಕಡಾ ೧೦-೨೫ರಷ್ಟು ಹಣವನ್ನು ವಾರ್ಷಿಕ ಯೋಜನೆಯಲ್ಲಿ ಮೀಸಲಿಡಬೇಕು ಎಂದಿದೆ. ಆದರೆ ನಮ್ಮ ದೇಶದಲ್ಲಿ ಇದರ ಭಾಗ ಕೇವಲ ಅರ್ಧದಿಂದ ಒಂದರಷ್ಟು ಮಾತ್ರ ಇದೆ. ಇದರಿಂದಾಗಿ ಶಿಕ್ಷಕರ ವೃತ್ತಿಪರತೆಯಲ್ಲಿ ನೈಪುಣ್ಯತೆಯನ್ನು ನಿರೀಕ್ಷಿಸುವುದು ಕಷ್ಟ ಎಂದೆನಿಸುತ್ತದೆ. ಬದಲಾಗುತ್ತಿರುವ ಪ್ರಾಪಂಚಿಕ ಕ್ರಿಯಾ ವ್ಯವಸ್ಥೆಗೆ ಅನುಗುಣವಾಗಿ ವಿದ್ಯಾರ್ಥಿಗಳನ್ನು ಉತ್ತಮ ಮಟ್ಟದಲ್ಲಿ ತಯಾರು ಮಾಡಲು ಸಾಧ್ಯವಾಗುತ್ತಿಲ್ಲ. ತರಗತಿಗಳಲ್ಲಿ ಅರ್ಧಕ್ಕೇ ಶಾಲೆ ಬಿಡುತ್ತಿರುವ ವಿದ್ಯಾರ್ಥಿಗಳ ಸಂಖ್ಯೆಯ ಅಂಕಿಅಂಶಗಳು ಗಾಬರಿಪಡಿಸುವ ರೀತಿಯಲ್ಲಿವೆ.

ಸರ್ಕಾರ ಮತ್ತು ಖಾಸಗಿ ಸಂಸ್ಥೆಗಳ ಆಡಳಿತ ಮಂಡಳಿಗಳು ಇದರತ್ತ ಹೆಚ್ಚು ಗಮನ ನೀಡಬೇಕಾಗಿದೆ. ಹಾಗಾದಾಗ ಮಾತ್ರ ಬದಲಾಗುತ್ತಿರುವ ಪ್ರಾಪಂಚಿಕ ಕ್ರಿಯಾವ್ಯವಸ್ಥೆಗೆ ಅನುಗುಣವಾಗಿ ಶೈಕ್ಷಣಿಕ ಪ್ರಕ್ರಿಯೆಯನ್ನು ಬದಲಾಯಿಸಬಹುದಾಗಿದೆ.

*

## ಶ್ರದ್ಧಾಂಜಲಿ

### ಶ್ರೀಮಠದ ಸದ್ಭಕ್ತೆ, ಶರಣೆ ಶ್ರೀಮತಿ ಪಾರ್ವತಮ್ಮನವರು ನಿಧನ



ಶ್ರೀಮಠದ ಸದ್ಭಕ್ತೆ ಶರಣೆ ಶ್ರೀಮತಿ ಪಾರ್ವತಮ್ಮ ಅವರು ಜುಲೈ ೧೨ರಂದು ನಿಧನರಾದರೆಂದು ತಿಳಿಸಲು 'ಸಿದ್ಧಗಂಗಾ' ವಿಷಾದ ವ್ಯಕ್ತಪಡಿಸುತ್ತದೆ.

ಚಿಕ್ಕಬಳ್ಳಾಪುರದ ದಿವಂಗತ ಸಿ.ವಿ. ಚೆನ್ನಯ್ಯ ಅವರ ಧರ್ಮಪತ್ನಿಯಾದ ಶ್ರೀಮತಿ ಪಾರ್ವತಮ್ಮನವರು ಸಂತಾನ ಭಾಗ್ಯದಿಂದ ವಂಚಿತರಾಗಿದ್ದರು. ಅವರು ತಮ್ಮ ಜೀವನದ ಬಹುತೇಕ ವೇಳೆಯನ್ನು ಸಮಾಜಸೇವೆಗಾಗಿ ಮುಡುಪಾಗಿಟ್ಟಿದ್ದರು. ತಮ್ಮ ಪತಿ ಶ್ರೀ ಚೆನ್ನಯ್ಯನವರು ಲಿಂಗೈಕ್ಯರಾದ ಮೇಲೆ ತಮ್ಮ ಆಸ್ತಿ ಸದ್ವಿನಿಯೋಗವಾಗಬೇಕೆಂಬ ಸದುದ್ದೇಶದಿಂದ ಶ್ರೀ ಸಿದ್ಧಗಂಗಾ ಕ್ಷೇತ್ರದ ತ್ರಿವಿಧ ದಾಸೋಹ ಕಾರ್ಯವನ್ನು ಹತ್ತಿರದಿಂದ ನೋಡಿ ಮನಗೊಂಡು ಶ್ರೀಮಠಕ್ಕೆ ದಾನವಾಗಿ ನೀಡಿದರು. ಪರಮಪೂಜ್ಯ ಶ್ರೀ ಶ್ರೀಗಳವರಲ್ಲಿ ಅಪಾರವಾದ ಭಕ್ತಿಯನ್ನಿರಿಸಿಕೊಂಡಿದ್ದ ಶ್ರೀಮತಿ ಪಾರ್ವತಮ್ಮನವರು ಕಳೆದ ಮೂರು ವರ್ಷಗಳಿಂದ ಶ್ರೀ ಕ್ಷೇತ್ರದ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಜುಲೈ ೧೨ರ ಬೆಳಗಿನ ಜಾವ ಇಹಲೋಕವನ್ನು ತ್ಯಜಿಸಿದರು. ಅವರ ಅಂತ್ಯಸಂಸ್ಕಾರ ಶ್ರೀಮಠದಲ್ಲಿ ಪರಮಪೂಜ್ಯ ಶ್ರೀಗಳವರ ದಿವ್ಯ ಸಮ್ಮುಖದಲ್ಲಿ ನಡೆಯಿತು.

'ಸಿದ್ಧಗಂಗಾ' ಅವರ ಆತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತದೆ.







# ಮಳೆನೀರಿನ ಸಂಗ್ರಹಣೆ ಮತ್ತು ಸದ್ಬಳಕೆ

– ಬಿ.ನಂ. ಚನ್ನಪ್ಪ
ನಿವೃತ್ತ ಮುಖ್ಯ ಇಂಜಿನಿಯರ್,
ನಂ. ೧೧೧೫, ೧೧ನೇ ಮುಖ್ಯರಸ್ತೆ,
ಪಶ್ಚಿಮಕಾರ್ಡ್‌ರಸ್ತೆ, ೨ನೇ ಹಂತ,
ಬೆಂಗಳೂರು – ೮೬.

ನೀರು ಪ್ರಕೃತಿ ನೀಡಿದ ಅಮೂಲ್ಯ ಕೊಡುಗೆ. ನೀರಿಲ್ಲದೆ ಯಾವ ಪ್ರಾಣಿಯೂ ಬದುಕಲಾರವು. ಮಾನವನ ದೈನಂದಿನ ಬದುಕಿನ ಎಲ್ಲ ಹಂತಗಳಲ್ಲೂ ನೀರಿನ ಬಳಕೆ ಅನಿವಾರ್ಯ ಹಾಗೂ ಅಗತ್ಯವೂ ಕೂಡ. ದಿನೇ ದಿನೇ ಬೆಳೆಯುತ್ತಿರುವ ಜನಸಂಖ್ಯೆ, ಪ್ರಕೃತಿಯ ವಿಕೋಪ, ಅರಣ್ಯ ನಾಶ – ಇವೇ ಮೊದಲಾದ ಕಾರಣಗಳಿಂದ ನೀರು ಪೋಲಾಗುತ್ತಿದೆ. ಪರಿಸ್ಥಿತಿ ಹೀಗೆ ಮುಂದುವರೆದರೆ ಮುಂದೊಂದು ದಿನ ನೀರಿನ ಅಂತರ್ಜಲಮಟ್ಟ ಕುಸಿದು ನೀರಿಗೆ ಹಾಹಾಕಾರ ಉಂಟಾಗುವ ಪರಿಸ್ಥಿತಿಯನ್ನು ಮರೆಯುವಂತಿಲ್ಲ. ಇಂತಹ ವಿಷಮ ಪರಿಸ್ಥಿತಿಯಲ್ಲಿ ನೀರಿನ ಸದ್ಬಳಕೆ ಅನಿವಾರ್ಯ. ನೀರು ಪೋಲಾಗದಂತೆ ನೋಡಿಕೊಳ್ಳುವುದು ಪ್ರತಿಯೊಬ್ಬರ ಕರ್ತವ್ಯವೂ ಹೌದು. ಈ ನಿಟ್ಟಿನಲ್ಲಿ ಪ್ರಕೃತಿ ನೀಡಿದ ಮಳೆನೀರನ್ನು ಸಂಗ್ರಹಿಸಿ ದೈನಂದಿನ ಕೆಲಸಕಾರ್ಯಗಳಿಗೆ ಬಳಸಿಕೊಳ್ಳುವುದು ಒಂದು ಉತ್ತಮ ವಿಧಾನ. ಪ್ರಸ್ತುತ ಲೇಖನದಲ್ಲಿ ಪ್ರಚಲಿತ ಸಮಸ್ಯೆಯನ್ನು ಕುರಿತು ಗಂಭೀರವಾಗಿ ಚಿಂತಿಸಿರುವ ಲೇಖಕರು ಮಳೆ ನೀರಿನ ಸಂಗ್ರಹದ ಬಗ್ಗೆ ವಿವರವಾಗಿ ಪರಿಚಯ ಮಾಡಿಕೊಟ್ಟಿದ್ದಾರೆ.

ನೀರು ಮನುಷ್ಯನಿಗೆ ಬೇಕಾದ ಮೂಲಭೂತ ಅವಶ್ಯಕತೆಗಳಲ್ಲಿ ಅತ್ಯಂತ ಪ್ರಮುಖವಾದುದು. ಅದಕ್ಕಾಗಿಯೇ ಅದನ್ನು ''ಜೀವಜಲ'' ಎಂದು ಕರೆಯಲಾಗುತ್ತದೆ. ನೀರಿಲ್ಲದೆ ಮನುಷ್ಯ ಬದುಕಲಾರ. ಮನುಷ್ಯನೇ . ಏಕೆ ! ಸಕಲ ಜೀವರಾಶಿಗಳಿಗೆ, ಸಸ್ಯಸಂಪತ್ತಿಗೆ ಹಾಗೂ ಈ ಪ್ರಕೃತಿಯ ಅಸ್ತಿತ್ವಕ್ಕೆ ನೀರೇ ಆಧಾರ. ಹಾಗಾಗಿ ನೀರು ಅಮೂಲ್ಯವಷ್ಟೇ ಅಲ್ಲ, ಅನಿವಾರ್ಯವೂ ಹೌದು. ಈ ವಿಶ್ವದ ಅಳಿವು ಉಳಿವಿಗೆ ಕಾರಣವಾಗಿರುವ ನೀರಿನ ಉಪಯೋಗ ಮತ್ತು ಬಳಕೆಯ ಬಗ್ಗೆ ಮಾನವನ ತಿಳುವಳಿಕೆ ಕಡಿಮೆಯೆಂದರೆ ತಪ್ಪಾಗಲಾರದು, ಅಥವಾ ಅದರ ಬಗ್ಗೆ ಅನಾಸಕ್ತಿ ಇರಬಹುದು. ಇಂತಹ ಮನೋಭಾವ ಭವಿಷ್ಯದ ದೃಷ್ಟಿಯಿಂದ ಅಕ್ಷಮ್ಯವಾದುದು. ಇದುವರೆಗೆ ನೀರಿನ ಕೊರತೆ ಒಂದು ತೀವ್ರ ಸಮಸ್ಯೆಯಾಗಿರಲಿಲ್ಲ. ಆದರೆ ಇಂದಿನ ಪರಿಸ್ಥಿತಿ ಬದಲಾಗಿದೆ. ಸುಮಾರು ೪೦% ಜನಗಳಿಗೆ ಒಳ್ಳೆಯ ನೀರು ಲಭ್ಯವಿಲ್ಲ. ಇದು ಸಮಸ್ಯೆಯನ್ನು ಜಟಿಲಗೊಳಿಸಿದೆ. ನೀರನ ಬಗ್ಗೆ ಅರಿವು (Water Literacy) ಇಂದು ಪ್ರತಿಯೊಬ್ಬರಿಗೂ ಬೇಕಾಗಿದೆ. ಅಂದರೆ ನಮಗೆ ಲಭ್ಯವಿರುವ ನೀರಿನ ಪ್ರಮಾಣ ಹಾಗೂ ನಾವು ಉಪಯೋಗಿಸುತ್ತಿರುವ ಪ್ರಮಾಣ ಎರಡನ್ನೂ ಸರಿದೂಗಿಸುವ ಬಗ್ಗೆ ತಿಳುವಳಿಕೆ ಅತಿ ಅವಶ್ಯಕ.

### *ನೀರಿನ ಲಭ್ಯತೆ*

ನಾವು ವಾಸಿಸುವ ಈ ಭೂಮಿಯ ಒಟ್ಟು ಪ್ರದೇಶದಲ್ಲಿ ಶೇ. ೭೦ರಷ್ಟು ನೀರಿನಿಂದ ಆವೃತ್ತವಾಗಿದೆ. ಉಳಿದ ಶೇ. ೩೦ರಷ್ಟು ಭೂಭಾಗವಿದೆ. ಭೂಮಿಯಲ್ಲಿರುವ ಒಟ್ಟು ನೀರಿನಲ್ಲಿ ಬಳಕೆಗೆ ಯೋಗ್ಯವಾದುದು ಶೇ. ೨½ಯಷ್ಟು ಮಾತ್ರ. ಉಳಿದದ್ದು ಉಪ್ಪಿನಿಂದ ಕೂಡಿದ ಸಮುದ್ರ ಹಾಗೂ ಸಾಗರಗಳಲ್ಲಿ ಸೇರಿ ಹೋಗಿದೆ. ಬಳಕೆಗೆ ಯೋಗ್ಯವಾದ ನೀರಿನಲ್ಲಿ ಶೇ ೮೦ರಷ್ಟು ಮಂಜುಗಡ್ಡೆ ರೂಪದಲ್ಲಿದ್ದು, ಉಳಿದ ಶೇ. ೩೦ರಷ್ಟು ಮಾತ್ರ ನಾವು ಉಪಯೋಗಿಸಬಹುದಾಗಿದೆ. ಅಂದರೆ ಒಟ್ಟು ನೀರಿನಲ್ಲಿ ನಮ್ಮ ಬಳಕೆಗೆ ಲಭ್ಯವಿರುವ ನೀರಿನ ಪ್ರಮಾಣ ಶೇ. ೦.೫೦ರಿಂದ ೦.೬೦ರಷ್ಟು ಮಾತ್ರ (ಶೇ. ೧ಕ್ಕಿಂತ ಕಡಿಮೆ). ಇಂತಹ ಅಮೂಲ್ಯವಾದ ನೀರನ್ನು ಹೇಗೆ ಬಳಕೆ ಮಾಡಬೇಕೆಂಬ ಅರಿವು ಪ್ರತಿಯೊಬ್ಬರಿಗೂ ಆಗಬೇಕಾಗಿದೆ. ಇಂತಹ ಅರಿವು ಮೂಡಿಸಲು, ೨೦೦೩ನೇ ವರ್ಷವನ್ನು 'ಅಂತರರಾಷ್ಟ್ರೀಯ ಜಲವರ್ಷ'ವನ್ನಾಗಿ ಆಚರಿಸಲಾಗುತ್ತಿದೆ.

### *ನೀರಿನ ಕೊರತೆ ಹಾಗೂ ಸಮಸ್ಯೆಗಳು*

ನೀರಿನ ಕೊರತೆಗೆ ಕಾರಣಗಳು ಹಲವಾರು. ಅವುಗಳಲ್ಲಿ ಅತಿ ಮುಖ್ಯವಾದವುಗಳೆಂದರೆ, ಅತಿವೇಗದಲ್ಲಿ ಬೆಳೆಯುತ್ತಿರುವ



ಕಟ್ಟಡಗಳಲ್ಲಿ ಮಳೆ ನೀರಿನ ಸಂಗ್ರಹ

ಜನಸಂಖ್ಯೆ, ಸಸ್ಯ ಸಂಪತ್ತಿನ ನಾಶ, ನೀರಿನ ಅತಿಯಾದ ಬಳಕೆ, ಭೂಮಿಯ ಸವಕಲು (Erosion of Soil), ನಗರೀಕರಣ, ಮತ್ತು ಪರಿಸರದ ಮೇಲೆ ಮಾನವನ ಸ್ವಾರ್ಥದಿಂದ ಆಗುತ್ತಿರುವ ಗಣಿಗಾರಿಕೆ, ಭಾರಿ ನೀರಾವರಿ ಯೋಜನೆಗಳ ನಿರ್ಮಾಣ, ಕಾಡುಗಳು ಹಾಗೂ ಅಲ್ಲಿನ ಜೀವಸಂಕುಲದ ನಾಶ, ನಗರಗಳ ಬೆಳವಣಿಗೆ, ಆಧುನಿಕ ಯಂತ್ರಗಳಿಂದ ಅಂತರ್ಜಲದ ದುರ್ಬಳಕೆ ಇತ್ಯಾದಿ. ಒಂದು ಸಮೀಕ್ಷೆಯ ಪ್ರಕಾರ ಪ್ರತಿವರ್ಷ ೯೦,೦೦೦ ಚ.ಕಿ.ಮೀ ಪ್ರದೇಶದಲ್ಲಿ ಕಾಡಿನ ಮತ್ತು ಅಲ್ಲಿನ ವನ್ಯಜೀವಿಗಳ ನಾಶವಾಗುತ್ತಿದೆ. ಇದುವರೆಗೆ ನಮಗೆ ತಿಳಿದಿದ್ದ ೮೦೦ ಜೀವ ಸಂಕುಲವು ನಾಶವಾಗಿಯೆಂದು ಹೇಳಲಾಗುತ್ತಿದೆ. ನಾವು ಸಕಾಲದಲ್ಲಿ ಎಚ್ಚೆತ್ತುಕೊಳ್ಳದಿದ್ದರೆ ಇಡೀ ವಿಶ್ವದಲ್ಲಿ ಭೀಕರ ಜಲಕ್ಷಾಮದಿಂದ ಸಕಲ ಜೀವರಾಶಿಗಳು, ಸಸ್ಯ ಸಂಪತ್ತು ಹಾಗೂ ಪರಿಸರ ನಾಶವಾಗಿ ದೊಡ್ಡ ದುರಂತವನ್ನು ಎದುರಿಸಬೇಕಾಗುತ್ತದೆ. ೨೦೨೫ರ ವೇಳೆಗೆ ವಿಶ್ವದ ಅನೇಕ ರಾಷ್ಟ್ರಗಳು ಅಂದರೆ ೨/೩ರಷ್ಟು ಜನರು ಭೀಕರ ಜಲಕ್ಷಾಮದಿಂದ ನರಳಬೇಕಾಗುತ್ತದೆ ಎಂಬುದು ಪರಿಸರ ತಜ್ಞರು, ಭೂವಿಜ್ಞಾನಿಗಳು ಮತ್ತು ಇಂಜನಿಯರುಗಳ ಅಭಿಪ್ರಾಯವಾಗಿದೆ. ಆದ್ದರಿಂದ ನೀರಿನ ಮಿತ ಬಳಕೆ ಹಾಗೂ ಸಂರಕ್ಷಣೆ ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ.

### *ಜಲಮಾಲಿನ್ಯ*

ನೀರಿನ ಕೊರತೆಗೆ ಜಲಮಾಲಿನ್ಯವೂ ಒಂದು ಮುಖ್ಯ ಕಾರಣವಾಗಿದೆ. ಅತಿಯಾದ ನಗರೀಕರಣದಿಂದ (Urbauisatrou) ನಗರಗಳಲ್ಲಿ ವಾಸಿಸುವ ಜನರಿಂದ ಮತ್ತು ಅನೇಕ ಕೈಗಾರಿಕೆಗಳಿಂದ ಉಪಯೋಗಿಸಿದ ಕಲುಷಿತ ನೀರು ಹಳ್ಳಗಳು, ನದಿ, ಕೆರೆಕುಂಟೆಗಳು, ಸರೋವರಗಳನ್ನು ಸೇರಿ ಮಲಿನಗೊಂಡು ಅನೇಕ ಸಮಸ್ಯೆಗಳನ್ನು ಸೃಷ್ಟಿಸಿದೆ. ದಿನೇ ದಿನೇ ಬೃಹದಾಕಾರವಾಗಿ ಬೆಳೆಯುತ್ತಿರುವ ಈ ಸಮಸ್ಯೆಯಿಂದ ಜಲಚರಗಳ, ಪ್ರಾಣಿಪಕ್ಷಿಗಳ ಬದುಕು ಅಸಹನೀಯ ಪರಿಸರ ನಾಶವಾಗುತ್ತಿದೆ. ಏಷ್ಯಾಖಂಡದ ಒಂದು ದಶಲಕ್ಷ ಜನಸಂಖ್ಯೆಗಿಂತ ಹೆಚ್ಚಿರುವ ನಗರಗಳಲ್ಲಿ ಜನಮಾಲಿನ್ಯದಿಂದ ಸುಮಾರು ೧೫ ಲಕ್ಷ ಜನ ಪ್ರತಿವರ್ಷ ಸಾವನ್ನಪ್ಪುತ್ತಿದ್ದಾರೆ ಎಂದು ತಿಳಿದು ಬಂದಿದೆ. ಒಂದು ಅಂದಾಜಿನ ಪ್ರಕಾರ ವಿಶ್ವದ ಶೇ. ೪೦ರಷ್ಟು ಜನರಿಗೆ ಒಳ್ಳೆಯ ನೀರು ಸಿಗುತ್ತಿಲ್ಲ. ಇದರ ಜೊತೆಗೆ ನೆಲ ಮತ್ತು ವಾಯುಮಾಲಿನ್ಯವೂ ಸೇರಿ ಇಡೀ ವಾತಾವರಣ ಕ್ರಮೇಣ ಕಲುಷಿತಗೊಳ್ಳುತ್ತಿದೆ. ವಾಯುಮಾಲಿನ್ಯದಲ್ಲಿ ಬಹುಮಟ್ಟಿಗೆ ಅಮೇರಿಕಾದಂತಹ ಮುಂದುವರಿದ ರಾಷ್ಟ್ರಗಳ ಪಾಲೇ ಹೆಚ್ಚಾಗಿದೆ.

### *ಪ್ರತಿವ್ಯಕ್ತಿಗೆ ಬೇಕಾದ ನೀರಿನ ಪ್ರಮಾಣ*

ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ ಪ್ರತಿವ್ಯಕ್ತಿಯ ನೀರಿನ ಅವಶ್ಯಕತೆಯ ಪ್ರಮಾಣ ಪ್ರತಿದಿನ ೧೩೫ರಿಂದ ೧೪೦ ಲೀಟರ್‌ಗಳು. ಇದರಲ್ಲಿ ಶೇ. ೨೦ರಷ್ಟು ಕುಡಿಯಲು ಹಾಗೂ ಅಡಿಗೆ ಮುಂತಾದ ಅವಶ್ಯಕತೆಗಳಿಗೆ ಉಪಯೋಗವಾಗುತ್ತದೆ. ಶೇ. ೬೦ರಷ್ಟು ಸ್ನಾನ, ಶೌಚಾಲಯ ಹಾಗೂ ಬಟ್ಟೆ ಶುದ್ಧಿಮಾಡಲು ಉಪಯೋಗಿಸಲ್ಪಡುತ್ತದೆ. ಉಳಿದ ಶೇ. ೨೦ರಷ್ಟು ತೋಟಗಾರಿಕೆ, ಮನೆಯ ಹಾಗೂ ಆವರಣದ ಸ್ವಚ್ಛತೆ, ವಾಹನಗಳನ್ನು ತೊಳೆಯುವುದು ಇತ್ಯಾದಿಗಾಗಿ ಬಳಕೆಯಾಗುತ್ತದೆ. ನಾಗರಿಕರಿಗೆ ಶುದ್ಧ ನೀರನ್ನು ಒದಗಿಸುವುದು ಅದರ ಲಭ್ಯತೆ, ಅದರ ಮೂಲ ಮತ್ತು ಅದರ ದೂರವನ್ನು ಅವಲಂಬಿಸಿರುವುದರಿಂದ ಅದೊಂದು ಭಗೀರಥ ಪ್ರಯತ್ನವಾಗಿ ಪರಿಣಮಿಸಿದೆ. ಶುದ್ಧೀಕರಿಸಿದ ನೀರನ್ನು ವಿವೇಚನೆಯಿಂದ ಬಳಸುವುದು ಎಲ್ಲರಿಗೂ ತಿಳಿಯಬೇಕು.

### *ಮಳೆಯ ನೀರು, ಅದರ ಸಂರಕ್ಷಣೆ ಮತ್ತು ಶೇಖರಣೆ*

ನೀರಿಗೆ ಬದಲಾಗಿ ಪರ್ಯಾಯ ವಸ್ತುವಿಲ್ಲ. ಅದು ಪ್ರಕೃತಿ ನೀಡಿರುವ ಅಮೂಲ್ಯ ಕೊಡುಗೆ. ಅದೃಷ್ಟದಿಂದ ನೀರು ಪುನರಾವರ್ತನೆಯಾಗುವ ಮೂಲವಾಗಿದೆ. (Renewable Source) ಈಗಾಗಲೇ ತಿಳಿಸಿದಂತೆ ಅದರ ಸಂರಕ್ಷಣೆ ಹಾಗೂ








ಮಳೆಯ ನೀರನ್ನು ಶುದ್ಧೀಕರಿಸುವ ವಿಧಾನ

ಸದ್ಬಳಕೆ ಪ್ರತಿಯೊಬ್ಬರ ಜೀವನ ವಿಧಾನವಾಗಬೇಕು. ನೀರು ದೊರಕುವುದು ಮಳೆಯ ಮೂಲಕ ಮಾತ್ರ. ಬಿದ್ದ ಮಳೆಯ ನೀರು ಹರಿದು ಹೋಗಿ ಸಮುದ್ರ ಸೇರುವ ಮುನ್ನ ಅದನ್ನು ತಡೆದು ಭೂಮಿಗೆ ಸೇರುವಂತೆ ಮಾಡುವುದು ಅಥವಾ ಬೇರೆ ಬೇರೆ ಮಾರ್ಗೋಪಾಯಗಳಿಂದ ಹಿಡಿದಿಟ್ಟುಕೊಳ್ಳುವುದು ಬಹಳ ಮುಖ್ಯ. ಇದನ್ನೆ ಮಳೆ ನೀರಿನ ಕುಯಿಲು ಅಥವಾ ಮಳೆ ನೀರನ ಶೇಖರಣೆ ಮತ್ತು ಸಂರಕ್ಷಣೆ (Rain water harvesting – R.W.H.) ಎಂದು ಕರೆಯುತ್ತಾರೆ. ಮಳೆಯಿಂದ ಬಿದ್ದ ನೀರು ಪೋಲಾಗದಂತೆ ತಡೆದು ಶೇಖರಿಸಲು ಅನೇಕ ವಿಧಾನಗಳನ್ನು ನಮ್ಮ ಪೂರ್ವಿಕರು ಹಿಂದಿ ನಿಂದಲೂ ಅನುಸರಿಸಿಕೊಂಡು ಬಂದಿದ್ದಾರೆ. ಇದಕ್ಕೆ ಉದಾಹರಣೆಯಾಗಿ ಹಳ್ಳಿಗಾಡಿನ ಪ್ರದೇಶದಲ್ಲಿ ಇಂದಿಗೂ ಇರುವ ಕೆರೆಗಳು, ಕುಂಟೆಗಳು, ಕಲ್ಯಾಣಿಗಳು, ಒಡ್ಡುಗಳು, ಅಣೆಕಟ್ಟುಗಳು ಮತ್ತು ಜಲಾಶಯಗಳನ್ನು ನೋಡಬಹುದು. ಕರ್ನಾಟಕದಲ್ಲಿ ಸುಮಾರು ೪೦,೦೦೦ ಕೆರೆಗಳಿವೆ. ಕೆರೆಗಳು ಪ್ರತಿಹಳ್ಳಿಯ ಜೀವನಾಡಿ ಎಂಬುದು ನಿರ್ವಿವಾದ. ಅದೇ ರೀತಿ ಬೇರೆ ಬೇರೆ ರಾಜ್ಯಗಳಲ್ಲಿ ವಿವಿಧ ರೀತಿಯ ಶೇಖರಣಾ ವಿಧಾನಗಳನ್ನು ನೋಡಬಹುದು. ಅಂತಹ ನೀರಿನ ಕೆಲವು ಆಸರೆಗಳು ಜನಸಂಖ್ಯಾ ಸ್ಫೋಟದಿಂದ ಅಂದರೆ ನಗರೀಕರಣದಿಂದ ಕಾಣೆಯಾಗುತ್ತಿದೆ. ಇನ್ನುಳಿದವು ಹೂಳು ತುಂಬಿ ಶೇಖರಣೆ ಪ್ರಮಾಣ ಕಡಿಮೆಯಾಗಿ ನೀರಿನ ಕೊರತೆಗೆ ಕಾರಣವಾಗಿದೆ.

ಸಾಮಾನ್ಯವಾಗಿ ಮಳೆನೀರಿನ ಸಂಗ್ರಹಣೆ ಮತ್ತು ಬಳಕೆಯನ್ನು ಪ್ರಮುಖವಾಗಿ ಎರಡು ಭಾಗವಾಗಿ ವಿಭಾಗಿಸಬಹುದು. ಒಂದು ಹಳ್ಳಿ ಗಾಡಿನ ಪ್ರದೇಶದಲ್ಲಿ ಮತ್ತು ಎರಡನೆಯದು ನಗರ ಪ್ರದೇಶದಲ್ಲಿ. ಹಳ್ಳಿಗಾಡಿನ ಪ್ರದೇಶದಲ್ಲಿ ಮುಖ್ಯವಾಗಿ ನೀರಾವರಿಗಾಗಿ, ಖುಷ್ಕಿ ಬೆಳೆಗಾಗಿ, ದನಕರುಗಳು ಹಾಗೂ ಮೀನುಗಾರಿಕೆಗಾಗಿ, ಮನೆಯ ಬಳಕೆಗಾಗಿ, ತೋಟಗಾರಿಕೆ ಮತ್ತು ಅಂತರ್ಜಲ ವರ್ಧನೆಗಾಗಿ ಉಪಯೋಗಿಸಬಹುದಾಗಿದೆ. ನಗರ ಪ್ರದೇಶ ದಲ್ಲಿ ಪ್ರಮುಖವಾಗಿ ಕುಡಿಯುವುದು, ಮನೆಯ ಇತರ ಉಪಹೋಗ, ತೋಟಗಾರಿಕೆ ಮತ್ತು ಅಂತರ್ಜಲ ವೃದ್ಧಿಗಾಗಿ ಉಪಯೋಗಿಸಬಹುದು. ನಾವು ಈಗ ನಗರ ಪ್ರದೇಶ ದಲ್ಲಿ ಮಳೆನೀರು ಶೇಖರಣೆ, ಮತ್ತು ಸಂಗ್ರಹಣೆ ಮತ್ತು ಬಳಕೆ ಬಗ್ಗೆ ಗಮನಹರಿಸೋಣ.

ನಗರ ಪ್ರದೇಶದಲ್ಲಿ ಬಯಲು ಪ್ರದೇಶವು ಕಡಿಮೆಯಿರುತ್ತದೆ. ಕಟ್ಟಡಗಳನ್ನು ಬಿಟ್ಟರೆ, ರಸ್ತೆಗಳು, ಚರಂಡಿಗಳು, ಪಾದಚಾರಿ ರಸ್ತೆಗಳು, ನಿವೇಶನದ ಉಳಿದ ಭಾಗ, ಸಾರ್ವಜನಿಕ ಉಪಯೋಗಕ್ಕೆ ಬಿಟ್ಟಿರುವ ನಿವೇಶನಗಳನ್ನು ಬಯಲು ಪ್ರದೇಶವೆಂದು (Open Spaces) ಪರಿಗಣಿಸಬಹುದು. ಇದರಲ್ಲಿ ಬಹುಭಾಗ ಕಾಂಕ್ರೀಟ್ ಹಾಕಿರುವ ಜಾಗ, ನೆಲಹಾಸುಗಳಿಂದಾವೃತವಾದ ಪಾದಚಾರಿ ರಸ್ತೆಗಳಿಂದ (Paved foot pahs etc) ನೀರು ಭೂಮಿಗೆ ಇಂಗಿ ಹೋಗಲು ಅವಕಾಶವಿರುವುದಿಲ್ಲ. ನಿವೇಶನದ ಉಳಿದ ಭಾಗವನ್ನು ಕೂಡ ಕಾಂಕ್ರೀಟಿನಿಂದಲೋ ಅಥವಾ ನೆಲಹಾಸುವಿನಿಂದಲೂ (Pavement Tiles) ಮುಚ್ಚಿರುವುದರಿಂದ ಮಳೆನೀರು ಸರಾಗವಾಗಿ ಚರಂಡಿ ಸೇರಿ ಹರಿದು ಹೋಗುತ್ತದೆ. ಆದ್ದರಿಂದ ಕಟ್ಟಡದ ಛಾವಣಿಯ ಮೇಲೆ ಬಿದ್ದ ಮಳೆ ನೀರನ್ನು ಸಂಗ್ರಹಿಸಿಟ್ಟುಕೊಂಡು ಉಪಯೋಗಿಸುವ ವಿಧಾನವು ಈಗ ರೂಢಿಗೆ ಬರುತ್ತಿದೆ. ಇದನ್ನು ''ಮಳೆ ನೀರಿನ ಕುಯಿಲು ಅಥವಾ ಮಳೆನೀರಿನ ಶೇಖರಣೆ ಹಾಗೂ ಸಂಗ್ರಹಣೆ'' (Rain Water harvesty) ಎಂದು ಕರೆಯಲಾಗುತ್ತದೆ. ಮಳೆ ನೀರನ್ನು ಅದು ಬಿದ್ದ ಜಾಗದಿಂದಲೇ ಹಿಡಿದು ಬಳಕೆ ಮಾಡುವುದು ಅತ್ಯಂತ ಉತ್ತಮ ವಿಧಾನ (Catch Rain Water Where it falls) ನಗರಗಳಲ್ಲಿ ಸಾಂಪ್ರದಾಯಕವಾಗಿ, ಕೆರೆಗಳು, ಸರೋವರಗಳು, ಕಲ್ಯಾಣಿಗಳ ಮುಖಾಂತರ ನೀರಿನ ಸಂಗ್ರಹಣೆಯಾಗುತ್ತಿತ್ತು. ನಗರ ಬೆಳೆದಂತೆ ಬಯಲು ಪ್ರದೇಶಗಳು (Open spaces) ಕಾಣೆಯಾಗಿ, ಇಡೀ ನಗರ ಕಾಂಕ್ರೀಟಿನ ಕಾನನವಾಗುತ್ತಿದೆ. ಮಳೆನೀರು ಹರಿದುಹೋಗಿ, ಅಂತರ್ಜಲ ಮಟ್ಟವು ನಮ್ಮ ನಿರೀಕ್ಷೆಗೂ ಮೀರಿ ಕುಸಿಯುತ್ತಿದೆ. ಪ್ರತಿವರ್ಷವೂ ಒಂದು ಮೀಟರ್‌ನಷ್ಟು ಕುಸಿತವಾಗುತ್ತಿದೆ. ಮಳೆನೀರು ಭೂಮಿಗೆ ಇಳಿದು ಅಂತರ್ಜಲ ವೃದ್ಧಿಯಾಗುವಂತೆ ಮಾಡುವುದು ಸರ್ಕಾರದ ಹಾಗೂ ಪ್ರತಿ ನಾಗರಿಕನ ಆದ್ಯ ಕರ್ತವ್ಯವಾಗಿದೆ. ಅದರಂತೆ ನಗರ ಪ್ರದೇಶದಲ್ಲಿ ಕಟ್ಟಡಗಳ




ಭಾವಣಿ ನೀರನ್ನು ಸಂಗ್ರಹಿಸಿ ಬಳಕೆ ಮಾಡುವುದು ಅತಿ ಅವಶ್ಯಕವಾಗಿದೆ.

### *ಭಾವಣಿ ನೀರಿನ ಶೇಖರಣೆ, ಸಂರಕ್ಷಣೆ ಮತ್ತು ಬಳಕೆ*

ವಿವಿಧ ಕಟ್ಟಡಗಳ ಭಾವಣಿ ಮೇಲೆ ಬಿದ್ದ ನೀರನ್ನು ಶೇಖರಿಸಿ ಉಪಯೋಗಿಸುವ ವಿಧಾನವನ್ನು ಈಗ ಎಲ್ಲ ನಗರಗಳಲ್ಲಿ ಅನುಸರಿಸಲಾಗುತ್ತಿದೆ. ಕಾರಣ, ನೀರಿನ ಅಭಾವ, ನಗರದಲ್ಲಿ ಕಟ್ಟಡಗಳಲ್ಲದೆ ರಸ್ತೆಗಳು, ಕಾಂಕ್ರೀಟಿನ ಫುಟ್‌ಪಾತ್‌ಗಳು, ಮನೆಯ ಸುತ್ತಲಿನ ಜಾಗವನ್ನು ಕಾಂಕ್ರೀಟಿನಿಂದ ಮುಚ್ಚುವುದು ಮೊದಲಾದ ಕ್ರಮಗಳಿಂದ ನೀರು ಭೂಮಿಗೆ ಇಳಿಯಲು ಅವಕಾಶವಿಲ್ಲದೆ ಹರಿದುಹೋಗಿ ಕಡೆಯದಾಗಿ ಸಮುದ್ರವನ್ನು ಸೇರುತ್ತದೆ. ಭಾವಣಿಯ ನೀರನ್ನು ಶೇಖರಿಸಿ ಉಪಯೋಗಿಸುವ ಬಗ್ಗೆ ಇಂಜಿನಿಯರುಗಳು, ಪರಿಸರತಜ್ಞರು ಅನೇಕ ಮಾರ್ಗೋಪಾಯಗಳನ್ನು ಅಳವಡಿಸುತ್ತಿದ್ದಾರೆ.

ಮಳೆನೀರು ಭಾವಣಿಯ ಮೇಲೆ ಬಿದ್ದಾಗ ಅದು ಒಂದು ಕಡೆಗೆ ಹರಿದು ಬರುವಂತೆ ಭಾವಣಿಯನ್ನು ಇಳಿಜಾರಾಗಿ ನಿರ್ಮಿಸಬೇಕು. ನೀರನ್ನು ಸಂಗ್ರಹಿಸಲು ಎಚ್.ಡಿ.ಪಿ.ಇ. ಅಥವಾ ಪಿ.ವಿ.ಸಿ. ಪೈಪುಗಳನ್ನು ಉಪಯೋಗಿಸಬೇಕು. ಸುಮಾರು ೮೫ ರಿಂದ ೧೦೦ ಚ.ಮೀ. ವಿಸ್ತಾರದ ಭಾವಣಿಯ ನೀರನ್ನು ಸಂಗ್ರಹಿಸಲು, ೧೦೦ ಮೀ.ಮೀ. ವ್ಯಾಸದ ಕೊಳವೆಗಳು (4" diar pipe) ಅಳವಡಿಸಿದರೆ ಸಾಕಾಗುತ್ತದೆ. ಇಂತಹ ನೀರನ್ನು ಸಂಗ್ರಹಿಸುವ ಮುನ್ನ ಶೋಧಿಸಬೇಕಾದುದು ಅವಶ್ಯಕ. ನೀರು ವಾಯುಮಾಲಿನ್ಯ ಮತ್ತು ಇತರ ಮಲಿನ ವಸ್ತುಗಳಿಂದ ಕಲುಷಿತವಾಗದಂತೆ ತಡೆಗಟ್ಟಲು ಶೋಧಕಗಳ ಮುಖಾಂತರ ಶೋಧಿಸಿ ಉಪಯೋಗಿಸಬೇಕು. ಇಂತಹ ಶೋಧಕಗಳು (Filters) ಕಾಂಕ್ರೀಟ್ ಅಥವಾ ಕಲ್ಲಿನ ತೊಟ್ಟಿಗಳು, ಹಂಡೆ ಮತ್ತು ಪಿ.ವಿ.ಸಿ. ಟ್ಯಾಂಕ್‌ಗಳಾಗಿರಬಹುದು. ಈ ಶೋಧಕಗಳಲ್ಲಿ ಮರಳು ಮತ್ತು ಜಲ್ಲಿಯನ್ನು ಉಪಯೋಗಿಸಬೇಕು. ಕುಡಿಯಲು ಉಪಯೋಗಿಸಬೇಕಾದರೆ; ಮರಳು ಜಲ್ಲಿಯ ಮಧ್ಯದಲ್ಲಿ ಇದ್ದಿಲನ್ನು ಉಪಯೋಗಿಸಬೇಕು.

ಮಳೆಯ ನೀರನ್ನು ಶೇಖರಿಸುವ ಮೊದಲು ಅನುಸರಿಸ ಬೇಕಾದ ನಿಯಮ ಅಥವಾ ವಿಧಾನಗಳು ಈ ಕೆಳಕಂಡಂತಿವೆ :

ಅ. ಭಾವಣಿಯು ಶುಚಿಯಾಗಿರಬೇಕು. (ಧೂಳು, ಮಣ್ಣು ಹಾಗೂ ಸಾಕು ಪ್ರಾಣಿಗಳ ಪ್ರವೇಶ ಇರಬಾರದು). ಆದ್ದರಿಂದ ಪ್ರಥಮವಾಗಿ ಬಿದ್ದ ಮಳೆನೀರನ್ನು ಸಂಗ್ರಹಿಸಬಾರದು.

ಆ. ಪಿ.ವಿ.ಸಿ. ಅಥವಾ ಎಚ್.ಡಿ.ಪಿ.ಇ. ಪೈಪುಗಳ ಮುಖಾಂತರ ನೀರನ್ನು ಸಂಗ್ರಹಿಸಬೇಕು.

ಇ. ಸಂಗ್ರಹಣೆಗೆ ಮುನ್ನ ಶೋಧಕಗಳ ಮುಖಾಂತರ ನೀರನ್ನು ಶೋಧಿಸಬೇಕು.

ಈ. ನೀರಿನ ತೊಟ್ಟಿಯಲ್ಲಿ ಸಂಗ್ರಹಿಸುವುದರಿಂದ ಆರ್ಥಿಕವಾಗಿ ಉಳಿತಾಯ ಮಾಡಬಹುದು. ಇಂತಹ ತೊಟ್ಟಿಗಳು ಭೂಮಿಯ ಮಟ್ಟದಿಂದ ಕೆಳಗೆ ಇರುವುದರಿಂದ ಗಾಳಿ, ಬೆಳಕಿನ ಸಂಪರ್ಕದಿಂದ ನೀರನ್ನು ಕೆಡದಂತೆ ರಕ್ಷಿಸಬಹುದು.

### *ಮಳೆ ನೀರಿನ ಕುಯಿಲಿನ ಪ್ರಮಾಣ*

ಬೆಂಗಳೂರಿನಲ್ಲಿ ಮಳೆಯು ಸರಾಸರಿ ೯೭೫ ಮಿ.ಮೀ. ಇದರಿಂದ ೧೦೦ ಚ.ಮೀ. ಭಾವಣಿಯ ವಿಸ್ತೀರ್ಣದಲ್ಲಿ ಸುಮಾರು ೮೦,೦೦೦ ಲೀಟರ್ ನೀರು ಲಭ್ಯವಾಗುತ್ತದೆ. ಕನಿಷ್ಠ ಮಳೆಯ ವರ್ಷದ ಆಧಾರದ ಮೇಲೆ ೪೦,೦೦೦ ಲೀಟರ್ ನೀರನ್ನು ಸಂಗ್ರಹಿಸಬಹುದು. (ಬೆಂಗಳೂರಿನ ಕನಿಷ್ಠ ಮಳೆಯ ಪ್ರಮಾಣ ವರ್ಷದಲ್ಲಿ ೬೮೩ ಮಿ.ಮಿ. ೧೦ ವರ್ಷದ ಸರಾಸರಿ) ಅಂದರೆ ಕನಿಷ್ಠ ಮಳೆ ಬಿದ್ದಾಗಲೂ ಸುಮಾರು ೪೦,೦೦೦ ಲೀಟರ್ ನೀರನ್ನು ಸಂಗ್ರಹಿಸಬಹುದು.

### *ಸಂಗ್ರಹಣೆ*

ಮೇಲೆ ತಿಳಿಸಿದಂತೆ, ಭಾವಣಿಯ ನೀರನ್ನು ಕೊಳವೆಗಳಲ್ಲಿ ಶೋಧಕ ಮುಖಾಂತರ ಹರಿಸಿ ಪ್ರತಿಮನೆಯಲ್ಲಿರುವ ತೊಟ್ಟಿಗಳಲ್ಲಿ ಶೇಖರಿಸುವುದು ಒಳ್ಳೆಯದು (Sump tank). ೧೦೦ ಚ.ಮೀ. ಭಾವಣಿಯ ನೀರಿಗೆ ೬೦೦೦ ಲೀಟರ್ ತೊಟ್ಟಿಯು ಸಾಕಾಗುತ್ತದೆ. ಇದಲ್ಲದೆ ಶೋಧಕದಿಂದ ಬಂದ ನೀರನ್ನು ಬಾವಿಯಿದ್ದರೆ ಬಾವಿಗೆ ಬಿಡಬಹುದು. ಇದರಿಂದ ಅಂತರ್ಜಲದ ವೃದ್ಧಿಯಾಗಿ, ಬಾವಿ ಮತ್ತು ಕೊಳವೆ ಬಾವಿಯಲ್ಲಿ ನೀರಿನ ಪ್ರಮಾಣ ಉತ್ತಮವಾಗಲು ಸಹಕಾರಿಯಾಗುತ್ತದೆ.





ಮಳೆ ನೀರನ್ನು ನೆಲದಿಂದ ಎತ್ತರದಲ್ಲಿ ಶೋಧಕಗಳಿಂದ ಹರಿಸಿ ಟ್ಯಾಂಕ್‌ಗಳಲ್ಲಿ ಸಂಗ್ರಹಿಸಬಹುದು. ಹಾಗೆ ಮಾಡಿದಲ್ಲಿ ನೀರನ್ನು ಉಪಯೋಗಿಸುವುದು ಸುಲಭ. ನೀರು ಯಾವ ಯಂತ್ರದ ಸಹಾಯವಿಲ್ಲದೆ ಗುರುತ್ವಾಕರ್ಷಣೆಯಿಂದ ಹರಿದು ಉಪಯೋಗಿಸಲು ಅನುಕೂಲವಾಗುತ್ತದೆ (Gravity flow) ಆದರೆ ಇದಕ್ಕೆ ನೀರಿನ ಟ್ಯಾಂಕ್ ಎತ್ತರದಲ್ಲಿ ಕಟ್ಟಲು ಹಣ ಖರ್ಚಾಗುತ್ತದೆ. ನೆಲಮಾಳಿಗೆಯ ಸಂಗ್ರಹ ಮಿತವ್ಯಯಕಾರಿ. ಆದರೆ ಇದರ ಉಪಯೋಗಮಾಡಲು ಯಂತ್ರದ ಸಹಾಯ ಬೇಕಾಗುತ್ತದೆ.

### *ಮಳೆ ನೀರಿನ ಉಪಯೋಗ*

ಹೀಗೆ ಸಂಗ್ರಹಿಸಿದ ನೀರನು ಕೈ ತೋಟಕ್ಕೆ, ವಾಹನ ಸ್ವಚ್ಛಗೊಳಿಸುವುದು, ಮನೆಯನ್ನು ಸಾರಿಸುವುದು/ತೊಳೆಯುವುದು, ಬಟ್ಟೆ ಒಗೆಯುವುದು ಮತ್ತು ಶೌಚಾಲಯಗಳಲ್ಲಿ ಉಪಯೋಗಿಸಬಹುದು. ಕುಡಿಯಲು ಅವಶ್ಯವಿದ್ದಾಗ ಪರೀಕ್ಷಿಸಿ ಉಪಯೋಗಿಸಬೇಕಾಗುತ್ತದೆ.

ನೀರನ್ನು ಹೆಚ್ಚುದಿನ ಸಂಗ್ರಹಿಸಿಡುವುದು ಕಷ್ಟ, ಬೇಸಿಗೆಯಲ್ಲಿ ಇದು ಸಾಧ್ಯವಾಗದಿರಬಹುದು. ಆದರೆ ಮಳೆಗಾಲದಲ್ಲಿ ಜಲಮಂಡಳಿಯ ನೀರಿಗೆ ಬದಲಾಗಿ ಉಪಯೋಗಿಸಬಹುದು. ಆದರೆ ಪ್ರತಿ ಮನೆಯಲ್ಲಿ ಭೂಮಿಗೆ ನೀರನ್ನು ಇಂಗಿಸಲು ಕ್ರಮ ತೆಗೆದುಕೊಂಡರೆ ಅಂತರ್ಜಲಮಟ್ಟ ಉತ್ತಮವಾಗುತ್ತದೆ. ಕೊಳವೆ ಬಾವಿಗಳಲ್ಲಿ ಸಾಕಷ್ಟು ನೀರು ಲಭ್ಯವಾಗುತ್ತದೆ. ನೀರು ಕೆಡಲು ಗಾಳಿ, ಸೂರ್ಯನ ಬೆಳಕು ಮತ್ತು ನೀರಿನಲ್ಲಿರುವ ಜೈವಿಕ ಪದಾರ್ಥಗಳು ಕಾರಣವಾಗುತ್ತದೆ. ಸಂಗ್ರಹಿಸಿದ ನೀರು ಕೆಡದಿರಲು ಸ್ಫಟಿಕ ಮತ್ತು ಬ್ಲೀಚಿಂಗ್‌ಪುಡಿ ಉಪಯೋಗಿಸಿ ಕೆಡದಂತೆ ಇಡಬಹುದು. ಒಂದು ದೊಡ್ಡ ಚಮಚ ಬ್ಲೀಚಿಂಗ್ ಪುಡಿಯನ್ನು ಎರಡು ಲೀಟರ್ ನೀರಿನಲ್ಲಿ ಮಿಶ್ರಣಮಾಡಿ ೧೦೦೦ ಲೀಟರ್ ನೀರಿಗೆ ಹಾಕಿದರೆ ನೀರು ಶುದ್ಧವಾಗುತ್ತದೆ. ಆದರೂ ಈ ನೀರನ್ನು ಕಾಯಿಸಿ ಕುಡಿಯುವುದು ಒಳ್ಳೆಯದು. ಸೊಳ್ಳೆಗಳು ತೊಟ್ಟಿಯಲ್ಲಿ ಪ್ರವೇಶಿಸದಂತೆ ನೋಡಿಕೊಳ್ಳಬೇಕು. ಇದಕ್ಕಾಗಿ ''ಗಪ್ಪಿ'' ಅಥವಾ ''ಮೊಲಿ'' ಮೀನುಗಳನ್ನು ಹಾಕಿ ಸೊಳ್ಳೆ ನಿಯಂತ್ರಿಸಬಹುದು.

ಇಂತಹ ನೀರಿನ ಕೊಯಿಲು ಮಾಡಲು ಒಂದು ಸಾವಿರದಿಂದ ೧೦,೦೦೦ ಅಥವಾ ೧೫,೦೦೦ ರೂ.ಗಳು ಖರ್ಚಾಗಬಹುದು.

ಭಾವಣಿಯ ಮೇಲೆ ಬಿದ್ದ ಮಳೆನೀರನ್ನು ಪೈಪುಗಳ ಮುಖಾಂತರ ಶೋಧಕಗಳಲ್ಲಿ ಶೋಧಿಸಿದ ನೀರನ್ನು ಸಂಗ್ರಹಣಾ ತೊಟ್ಟಿ ಶೇಖರಿಸಬೇಕು. ಹೆಚ್ಚು ನೀರು ಇದ್ದರೆ ಬಾವಿಯಿದ್ದಲ್ಲಿ ಅದಕ್ಕೆ ಬಿಡಬಹುದು. ೧೧೦ ಚ.ಮೀ. ಭಾವಣಿ ನೀರಿಗೆ ೬೦೦೦ ಲೀಟರ್ ನೀರಿನ ತೊಟ್ಟಿ ಬೇಕಾಗುತ್ತದೆ.

ಭಾವಣಿಯ ನೀರು ಶೋಧಕದಿಂದ ನೀರಿನ ತೊಟ್ಟಿಗೆ ತೆಗೆದುಕೊಂಡು ಹೋಗುವುದು. ತೊಟ್ಟಿ ತುಂಬಿದ ಮೇಲೆ, ಹೆಚ್ಚಿನ ನೀರನ್ನು ಕೊಳವೆ ಬಾವಿಗೆ ಬಿಡಬಹುದು.

ಈ ತರಹದ ನೀರು ಹಿಂಗಿಸುವ ಸಣ್ಣ ಹೊಂಡವನ್ನು ಬಾವಿ ತೆಗೆಯಲು ಜಾಗ ಇಲ್ಲದ ಕಡೆ ನಿರ್ಮಾಣ ಮಾಡಬಹುದು.

### *ಸರ್ಕಾರದ ಪಾತ್ರ*

ಸಾರ್ವಜನಿಕರು ತಮ್ಮ ತಮ್ಮ ನಿವೇಶನಕ್ಕೆ ಹೊಂದಿಕೆಯಾಗುವ ರೀತಿಯಲ್ಲಿ ಮಳೆಯ ನೀರನ್ನು ಸಂಗ್ರಹಣೆ ಮಾಡುವ ವಿಧಾನಗಳನ್ನು ಅಳವಡಿಸಬಹುದು. ಆದರೆ ಬಯಲು ಪ್ರದೇಶ ಅಂದರೆ ಉದ್ಯಾನವನಗಳು ಮತ್ತು ಸರ್ಕಾರದ ಕಟ್ಟಡಗಳು ಮತ್ತು ಸಾರ್ವಜನಿಕ ನಿವೇಶನಗಳಲ್ಲಿ ಮಳೆನೀರಿನ ಕೊಯಿಲು ಮಾಡುವುದು ಸರ್ಕಾರದ ಅಥವಾ ನಗರ ಪಾಲಿಕೆಗಳ ಮತ್ತು ನಗರಾಭಿವೃದ್ಧಿ ಮಂಡಳಿ ಕರ್ತವ್ಯವಾಗಿದೆ. ಜೊತೆಗೆ ಸರ್ಕಾರ/ಸಂಘ ಸಂಸ್ಥೆಗಳು ಸಾರ್ವಜನಿಕರಿಗೆ ಇದರ ಬಗ್ಗೆ ಅರಿವು ಮೂಡಿಸಲು ಕಾರ್ಯಕ್ರಮಗಳನ್ನು ರೂಪಿಸಬೇಕು.

ನಗರ ಪ್ರದೇಶಗಳಲ್ಲಿ ಕಟ್ಟಡಗಳನ್ನು ಕಟ್ಟಿಸುವ ನಕ್ಷೆಗಳನ್ನು ಮಂಜೂರು ಮಾಡುವಾಗ ನಿಯಮಗಳನ್ನು ರೂಪಿಸಿ ಕಡ್ಡಾಯವಾಗಿ ನೀರನ್ನು ಕುಯಿಲು ಮಾಡಲು ಆದೇಶ ಮಾಡುವುದು ಅಗತ್ಯವಾಗಿದೆ. ಈಗಾಗಲೇ ಚನ್ನೈ, ಹೈದರಾಬಾದ್, ಇಂದೂರ್ ಮೊದಲಾದ ನಗರಗಳಲ್ಲಿ ಇಂತಹ ನಿಯಮಗಳು ಜಾರಿಯಲ್ಲಿವೆ. ಕರ್ನಾಟಕ ಸರ್ಕಾರ ಕೂಡ ಈ ದಿಸೆಯಲ್ಲಿ ನಿಯಮಗಳನ್ನು ರೂಪಿಸುತ್ತಿದೆ.

ಒಟ್ಟಿನಲ್ಲಿ ನೀರಿನ ಮಹತ್ವವನ್ನು ಅರಿತು ಸಾರ್ವಜನಿಕರು, ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಒಟ್ಟಾಗಿ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ನೀರು ಪೋಲಾಗದಂತೆ ನೋಡಿಕೊಂಡು, ಅದರ ಸಂಗ್ರಹಣೆ ಮಾಡಿಕೊಂಡು ನೀರಿನ ಬವಣೆಯನ್ನು ನೀಗಿಸಲು ಸತತವಾಗಿ ಪ್ರಯತ್ನಶೀಲರಾಗಬೇಕಾಗಿದೆ.

**(ಇದರ ಬಗ್ಗೆ ಹೆಚ್ಚಿನ ಮಾಹಿತಿ ಮತ್ತು ಮಾರ್ಗದರ್ಶನಕ್ಕಾಗಿ, ಶ್ರೀ ಎಸ್. ವಿಶ್ವನಾಥ್, ಕನ್ಸಲ್ಟೆಂಟ್ ಮತ್ತು ಮಳೆನೀರಿನ ಕ್ಲಬ್ (Rain Water Clubನ ಸಂಸ್ಥಾಪಕರು ಇವರನ್ನು ಸಂಪರ್ಕಿಸಬಹುದು).**

★

ಬೇಕಾದರೆ, ಮರಳು ಜಲ್ಲಿಯ ಮಧ್ಯದಲ್ಲಿ ಇದ್ದಿಲನ್ನು ಉಪಯೋಗಿಸಬೇಕು.

ಮಳೆಯ ನೀರನ್ನು ಶೇಖರಿಸುವ ಮೊದಲು ಅನುಸರಿಸ ಬೇಕಾದ ನಿಯಮ ಅಥವಾ ವಿಧಾನಗಳು ಈ ಕೆಳಕಂಡಂತಿವೆ :

ಅ. ಛಾವಣಿಯು ಶುಚಿಯಾಗಿರಬೇಕು. (ಧೂಳು, ಮಣ್ಣು ಹಾಗೂ ಸಾಕು ಪ್ರಾಣಿಗಳ ಪ್ರವೇಶ ಇರಬಾರದು). ಆದ್ದರಿಂದ ಪ್ರಥಮವಾಗಿ ಬಿದ್ದ

## ಸೇವಾಸೌಜನ್ಯಶೀಲ ಶ್ರೀ ಕಸ್ತೂರಿ ರಮೇಶ್ ಪೈ



*ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ, ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜನ್ಮದಿನವನ್ನು ಗುರುವಂದನ ಸಮಾರಂಭವಾಗಿ ಸಡಗರ ಸಂಭ್ರಮ ಹಾಗೂ ಅರ್ಥಪೂರ್ಣವಾಗಿ ಆಚರಿಸುವ ದೃಷ್ಟಿಯಿಂದ ಪ್ರತಿವರ್ಷ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಗಣ್ಯರನ್ನು ಗೌರವಿಸುವ ಸಂಪ್ರದಾಯವನ್ನು ಹಮ್ಮಿಕೊಂಡು ನಡೆಸಿಕೊಂಡು ಬರಲಾಗುತ್ತಿದೆ. ಅದರಂತೆ ೯೬ನೇ ಗುರುವಂದನ ಸಮಾರಂಭದಲ್ಲಿ ಶ್ರೀ ಮತ್ತೂರು ಕೃಷ್ಣಮೂರ್ತಿ, ಶ್ರೀ ವಿಜಯ ಸಂಕೇಶ್ವರ, ಡಾ. ಕೆ.ಟಿ. ಸುರೇಂದ್ರ, ಶ್ರೀ ಡಿ.ಕೆ. ಆದಿಕೇಶವುಲು ಹಾಗೂ ಶ್ರೀ ಕಸ್ತೂರಿ ರಮೇಶ್ ಪೈ ಅವರಿಗೆ ಪರಮಪೂಜ್ಯ ಶ್ರೀ ಶ್ರೀಗಳವರು ಶಾಲುಹೊದಿಸಿ ಫಲತಾಂಬೂಲ, ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು. ಸೇವಾ ಸೌಜನ್ಯಶೀಲರಾಗಿ ಅನುಪಮ ಸೇವೆ ಸಲ್ಲಿಸಿದ ಶ್ರೀ ಕಸ್ತೂರಿ ರಮೇಶ್ ಪೈ ಅವರ ಪರಿಚಯವನ್ನು ಪ್ರಸ್ತುತ ಸಂಚಿಕೆಯಲ್ಲಿ ಪರಿಚಯ ಮಾಡಿಕೊಡಲಾಗಿದೆ.*

ಕಡಲ ಕಿನಾರೆಯ ದಕ್ಷಿಣ ಕನ್ನಡ ಜಿಲ್ಲೆ ಹಲವು ವೈಶಿಷ್ಟ್ಯಗಳಿಗೆ, ಪ್ರತಿಭೆಗಳಿಗೆ, ಉದಾತ್ತ ಚೇತನಗಳಿಗೆ ಇಂಬುನೀಡಿದ ಕರ್ನಾಟಕ ಸುಂದರಭಾಗ, ಕೈಗಾರಿಕೆ, ಬ್ಯಾಂಕೋದ್ಯಮ, ಶಿಕ್ಷಣ ಸೇವೆಗಳಿಗೆ ತಮ್ಮನ್ನು ಅರ್ಪಿಸಿಕೊಂಡ ಉದಾರಚರಿತರು ದಕ್ಷಿಣ ಕನ್ನಡ ಜಿಲ್ಲೆಯವರು. ಯಕ್ಷಗಾನ ಕಲೆಯನ್ನು ವಿಶ್ವದಾದ್ಯಂತ ವಿಸ್ತರಿಸಿದಂತೆಯೇ ಬ್ಯಾಂಕೋದ್ಯಮವನ್ನು ವ್ಯಾಪಕಗೊಳಿಸಿದ, ಕೈಗಾರಿಕೆಗಳನ್ನು ವೃದ್ಧಿಗೊಳಿಸಿದ ಯಶಸ್ವಿಗಳು ಅಲ್ಲುಂಟು. ಕಡಲಿನ ಸ್ಫೂರ್ತಿ, ಕ್ರಿಯಾಶೀಲತೆ, ವ್ಯವಹಾರ ಕೌಶಲ್ಯ, ಸಾಹಿತ್ಯ ಸೌಗಂಧಗಳಿರುವ ದಕ್ಷಿಣ ಕನ್ನಡ ಜಿಲ್ಲೆ ರಾಜ್ಯದ ಜಾಗೃತ ಪ್ರಜಾಸಮುದಾಯವನ್ನು ಹೊಂದಿರುವ ಸುಸಂಸ್ಕೃತ ಪ್ರದೇಶ.

ಪೈ ಮತ್ತು ಕಾಮತ್ ಮನೆತನಗಳು ಜಿಲ್ಲೆಯಲ್ಲಿ ಪ್ರಸಿದ್ಧವೆನಿಸಿದವು. ಮಂಗಳೂರಿನ ಹೆಸರಾಂತ ಪೈ ಕುಟುಂಬಗಳಲ್ಲೊಂದಾದ ಕಸ್ತೂರಿ ಕುಟುಂಬ ಹೆಸರಿಗೆ ತಕ್ಕ ಹಾಗೆ ಸುಸಂಸ್ಕೃತಿಯನ್ನು ರೂಢಿಸಿಕೊಂಡು ಬಂದದ್ದು. ಶ್ರೀ ರಮೇಶ್ ಪೈ ಅವರು ಶ್ರೀ ಕಸ್ತೂರಿ ಶೇಷಗಿರಿ ಮತ್ತು ಶ್ರೀಮತಿ ಕಮಲಾವತಿಬ್ಬಾ ಅವರ ಮೂರನೆಯ ಮಗ. ದಿನಾಂಕ ೫.೨.೧೯೩೬ರಂದು ಕಸ್ತೂರಿ ಕುಟುಂಬದಲ್ಲಿ ಜನಿಸಿದ ಸೌಜನ್ಯಪುಷ್ಪ. ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ಮೆಟ್ರಿಕ್ ವರೆಗೆ ವ್ಯಾಸಂಗ ಮಾಡಿದರು. ಪಿತೃವಾಕ್ಯ ಪರಿಪಾಲಕರಾದ ಶ್ರೀ ರಮೇಶ ಪೈಯವರು ೧೯೫೩ರಲ್ಲಿ ಕುಟುಂಬದ ವೃತ್ತಿಯಾದ ವ್ಯಾಪಾರದಲ್ಲಿ ತೊಡಗಿದರು. ೧೯೫೫ರಲ್ಲಿ ತುಮಕೂರಿಗೆ ಆಗಮಿಸಿ ವ್ಯಾಪಾರೋದ್ಯಮವನ್ನು ಮುಂದುವರಿಸಿದರು. ೧೯೫೮ರಲ್ಲಿ ದಕ್ಷಿಣ ಕನ್ನಡ ಜಲ್ಲೆಯ ಮುಂಡ್ಕೂರು ಗ್ರಾಮದ ವ್ಯಾಪಾರಸ್ಥರಾದ ಶ್ರೀ ಲಕ್ಷ್ಮಣ ಕಾಮತ್ ಮತ್ತು ಶ್ರೀಮತಿ ಪದ್ಮಾವತಿ ಬ್ಬಾ ಅವರ ಸುಪುತ್ರಿಯಾದ ಶ್ರೀಮತಿ ವಸಂತಿಯನ್ನು ವಿವಾಹವಾದರು. ಶ್ರೀಯುತರ ದಾಂಪತ್ಯ ಜೀವನ *"ಸತಿಪತಿಗಳೊಂದಾಗ ಭಕ್ತಿ ಹಿತವಪ್ಪುದು ಶಿವಂಗೆ"* – ಎಂಬಂತೆ ಸಾಗಿತು. ಪತಿ-ಪತ್ನಿಯರು ಹಾಲು-ಜೇನಿನಂತೆ ಬೆರೆತರು. ತಮ್ಮ ಸುಚ್ಚಾರಿತ್ರ್ಯ, ಸತ್ಸೇವೆಯ ಸಕ್ಕರೆಯನ್ನು ಕೂಡಿಸಿದವರು. ಮಧುರ ದಾಂಪತ್ಯದಲ್ಲಿ ಒಂದು ಗಂಡು ಮೂರು ಹೆಣ್ಣು ಹೂಗಳರಳಿದುವು. ಎಲ್ಲರಿಗೂ ಶ್ರೀ ಪೈಯವರು ಮದುವೆ ಮಾಡಿದ್ದಾರೆ. ಏಳು ಮೊಮ್ಮಕ್ಕಳನ್ನು ಕಂಡು ಸಂತೋಷಿಸಿದ್ದಾರೆ. ಆದರ್ಶ ಗೃಹಸ್ಥರೆನಿಸಿದ್ದಾರೆ.

ಶ್ರೀ ರಮೇಶ್‌ಪೈಯವರು ತುಮಕೂರಿನ ಸಾರ್ವಜನಿಕ ಜೀವನದಲ್ಲಿ ಮನೆಮಾತಾಗಿದ್ದಾರೆ. ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಕ್ಷೇತ್ರದಲ್ಲಿ ನಿಸ್ವಾರ್ಥಸೇವೆ ಸಲ್ಲಿಸುತ್ತ ಬಂದಿದ್ದಾರೆ.





ತುಮಕೂರಿನ ಅನೇಕ ಸಂಘಸಂಸ್ಥೆಗಳಿಗೆ ಉದಾರವಾಗಿ ಸಹಾಯಮಾಡಿ ವಿನಮ್ರರಾಗಿದ್ದಾರೆ. *"ಮಾಡಿದೆನೆಂಬುದು ಮನದಲ್ಲಿ ಹೊಳೆಯದ"* ನಿರಹಂಕಾರದ ಸೌಮ್ಯಶೀಲರೆನಿಸಿದ್ದಾರೆ.

ಶ್ರೀ ಪೈಯವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವ್ಯೋಮಸದೃಶ ವ್ಯಕ್ತಿತ್ವಕ್ಕೆ ಮಾರು ಹೋಗಿದ್ದಾರೆ; ಶ್ರೀಗಳವರಲ್ಲಿ ಅನನ್ಯ ಶ್ರದ್ಧೆ ಭಕ್ತಿಗಳನ್ನಿಟ್ಟುಕೊಂಡಿದ್ದಾರೆ. ಶ್ರೀಮಠದ ಜನಕಲ್ಯಾಣಸೇವೆಯಲ್ಲಿ ೧೯೬೩ರಿಂದ ತಮ್ಮನ್ನು ಅರ್ಪಿಸಿಕೊಂಡು ಬಂದಿದ್ದಾರೆ. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಆಡಳಿತ ಸಮಿತಿಯ ಸದಸ್ಯರಾಗಿ ೧೯೭೮ರಿಂದ ಸಕ್ರಿಯ ಸೇವೆ ಸಲ್ಲಿಸುತ್ತಿದ್ದಾರೆ. ತುಮಕೂರಿನ ರೋಟರಿ ಸಂಸ್ಥೆಯ ಅಧ್ಯಕ್ಷರಾಗಿ ೧೯೬೮-೬೯ನೇ ವರ್ಷದಲ್ಲಿ ಸಲ್ಲಿಸಿದ ಸೇವೆ ಸ್ಮರಣೀಯವಾಗಿದೆ. ಚಾರ್ಟರ್ಡ್ ಮೆಂಬರಾಗಿ ಜನಾನುರಾಗಿಗಳಾಗಿದ್ದಾರೆ. ಸದ್ಯದಲ್ಲಿ ತುಮಕೂರಿನ ಸರ್ವೋದಯ ವಿದ್ಯಾಸಂಸ್ಥೆಯ ಅಧ್ಯಕ್ಷರಾಗಿ, ಶ್ರೀ ವಿದ್ಯೋದಯ ವಿದ್ಯಾಸಂಸ್ಥೆಯ ಟ್ರಸ್ಟಿಯಾಗಿ, ಟಿ.ಜಿ.ಎಂ.ಸಿ. ಚಾರಿಟಬಲ್ ಟ್ರಸ್ಟ್‌ನ ಟ್ರಸ್ಟಿಯಾಗಿ ಸೇವಾಪಥದಲ್ಲಿ ಮುನ್ನಡೆದಿದ್ದಾರೆ. ದೇಶ-ವಿದೇಶ ಪ್ರವಾಸ ಮಾಡಿರುವ ಶ್ರೀಯುತರು ಅನುಭವ ಶ್ರೀಮಂತಿಕೆಯ ಗುಣಾಢ್ಯರಾಗಿರುವುದು ಅಭಿಮಾನ ಅಭಿನಂದನೀಯವಾದುದು.

ಶ್ರೀ ರಮೇಶ್‌ಪೈಯವರು ಮಿತಭಾಷಿಗಳು, ಹಿತಭಾಷಿಗಳು, ಸರಳತೆಗೆ, ದಕ್ಷತೆಗೆ, ಪ್ರಾಮಾಣಿಕತೆಗೆ ಹೆಸರಾದವರು. ಮಿತ್ರ ಸಂಪತ್ತಿನಲ್ಲಿ ಎತ್ತಿದ ಕೈ ಅವರದು. ವ್ಯವಹಾರದಲ್ಲಿ ಸತ್ಯಶುದ್ಧರು. ಕಸ್ತೂರಿಯಂತೆ ಘಮ ಘಮಿಸುವ ಸುಗಂಧ ವ್ಯಕ್ತಿತ್ವವುಳ್ಳವರು.

ಶ್ರೀ ಕಸ್ತೂರಿ ರಮೇಶ್‌ಪೈಯವರ ನಿರಾಡಂಬರ ವ್ಯಕ್ತಿತ್ವವನ್ನು ಗಮನಿಸಿದ ಶ್ರೀ ಸಿದ್ಧಗಂಗಾ ಮಠದ **ಯುಗಪುರುಷರೆನಿಸಿದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ** ಭಕ್ತಾದಿಗಳು, ಅಭಿಮಾನಿಗಳು ಮತ್ತು ಹಳೆಯ ವಿದ್ಯಾರ್ಥಿಗಳು, ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯಲ್ಲಿ ಸೇವಾನಿರತರಾಗಿರುವ ಸಮಸ್ತ ಬಂಧು-ಭಗಿನಿಯರು **ಪರಮಪೂಜ್ಯ ಶ್ರೀ ಶ್ರೀಗಳವರ** ೯೬ನೇ ಜನ್ಮದಿನೋತ್ಸವ **'ಗುರುವಂದನ'** ಸಮಾರಂಭದಲ್ಲಿ ಶ್ರೀ ರಮೇಶ್ ಪೈಯವರನ್ನು "ಸೇವಾ ಸೌಜನ್ಯಶೀಲ"ರೆಂದು ಗೌರವಿಸಿ ಸನ್ಮಾನಿಸಲಾಯಿತು.

❀

## ನಿವೃತ್ತ ಸಂಸ್ಕೃತ ಉಪಪ್ರಾಧ್ಯಾಪಕ ವಿದ್ವಾನ್ ಶಿವಶಂಕರಯ್ಯ ನಿಧನ



ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿರುವ ಸಂಸ್ಕೃತ ಕಾಲೇಜಿನಲ್ಲಿ ಉಪಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದ ವಿದ್ವಾನ್ ಶಿವಶಂಕರಯ್ಯ ಅವರು ದಿನಾಂಕ ೩೧.೭.೨೦೦೩ ರಂದು ನಿಧನರಾದರೆಂದು ತಿಳಿಸಲು ವಿಷಾದವಾಗುತ್ತದೆ.

ಸರಳತೆ ಮತ್ತು ಸಜ್ಜನಿಕೆಗೆ ಹೆಸರಾಗಿದ್ದ ವಿದ್ವಾನ್ ಶಿವಶಂಕರಯ್ಯ ಅವರು ಆದರ್ಶ ಶಿಕ್ಷಕ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ಶಿಕ್ಷಕ ವೃತ್ತಿ ತಮಗೆ ದೊರೆತ ಸದಾವಕಾಶ, ಪುಣ್ಯವಿಶೇಷ ಎಂದು ಭಾವಿಸಿದ್ದ ಅವರು ತಮ್ಮ ವಿದ್ವತ್‌ಪೂರ್ಣ ಬೋಧನೆಯಿಂದ ವಿದ್ಯಾರ್ಥಿಗಳ ಮನಸ್ಸನ್ನು ಗೆದ್ದಿದ್ದರು. ಒಬ್ಬ ಆದರ್ಶ ಶಿಕ್ಷಕನಿಗಿರಬೇಕಾದ ಎಲ್ಲಾ ಗುಣಗಳನ್ನು ಮೈಗೂಡಿಸಿಕೊಂಡಿದ್ದ ಶ್ರೀಯುತರು ಶ್ರೀಮಠ ಹಾಗೂ ಪೂಜ್ಯ ಶ್ರೀಗಳವರ ಬಗ್ಗೆ ಅತೀವ ಗೌರವ, ಭಕ್ತಿಯನ್ನಿಟ್ಟುಕೊಂಡಿದ್ದರು. ನಿವೃತ್ತಿಯ ನಂತರ ತಮ್ಮ ಸೇವೆಯನ್ನು ಶ್ರೀಮಠದ ವಿವಿಧ ಕಾರ್ಯಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದರು.

ಶ್ರೀಯುತರ ಆತ್ಮಕ್ಕೆ ಚಿರಶಾಂತಿಯನ್ನು ದಯಾಮಯನಾದ ಭಗವಂತನು ಕರುಣಿಸಲಿ ಎಂದು ಹಾಗೂ ಅವರ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬ ವರ್ಗಕ್ಕೆ ನೀಡಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.



# ಪ್ರಾಣಿಗಳಿಂದ ಮನುಷ್ಯನಿಗೆ ಹರಡುವ ರೋಗಗಳು

– ಡಾ. ಎಂ.ಎಸ್. ರಾಜಣ್ಣ
ಪ್ರಾಧ್ಯಾಪಕರು, ಸಮುದಾಯ ವೈದ್ಯಶಾಸ್ತ್ರ ವಿಭಾಗ,
ಕೆಂಪೇಗೌಡ ಮೆಡಿಕಲ್ ಕಾಲೇಜು, ಬೆಂಗಳೂರು.

ಪ್ರತಿವರ್ಷ ಜುಲೈ ೬ರಂದು ''ವಿಶ್ವ ಝೂನೋಸಿಸ್ ಡೇ'' ಎಂದು ಆಚರಿಸುತ್ತಾರೆ. ಝೂನೋಸಿಸ್ ಅಂದರೆ ಪ್ರಾಣಿಗಳಿಂದ ಮನುಷ್ಯನಿಗೆ ಪ್ರಕೃತಿದತ್ತವಾಗಿ ಹರಡುವ ರೋಗಗಳು ಎಂದು ಅರ್ಥನೀಡಲಾಗಿದೆ. ಪ್ರಾಣಿಗಳೊಂದಿಗೆ ಮನುಷ್ಯ ಸಹಜೀವಿಯಾಗಿ ಅಂದರೆ ಒಟ್ಟಿಗೆ ಬದುಕುತ್ತಿದ್ದಾನೆ. ಹಾಲು, ಮೊಟ್ಟೆ, ಮಾಂಸ, ಚರ್ಮ ಇತ್ಯಾದಿಗಳಿಗಾಗಿ ಪ್ರಾಣಿಗಳನ್ನು ಸಾಕುತ್ತಾನೆ. ಹೀಗೆ ಸಾಮಾಜಿಕ ಆರ್ಥಿಕ ಅಭಿವೃದ್ಧಿ ಪ್ರಾಣಿಗಳ ಮೇಲೆ ಮನುಷ್ಯ ಅವಲಂಬಿತನಾಗಿದ್ದಾನೆ. ಈ ರೀತಿ



ನಾಯಿಯಿಂದ ರೇಬೀಸ್



ಪ್ರಾಣಿಗಳೊಂದಿಗೆ ಒಟ್ಟಿಗೆ ಜೀವಿಸುವಾಗ ಪ್ರಾಣಿಗಳಿಂದ ಮನುಷ್ಯನಿಗೆ ಅನೇಕ ರೋಗಗಳು ಹರಡುವುದನ್ನು ನಾವು ಗಮನಿಸಬಹುದು. ಇವುಗಳಲ್ಲಿ ಬಹಳ ಮುಖ್ಯವಾದವುಗಳನ್ನು ತಿಳಿಯಬೇಕೆಂದರೆ ರೇಬೀಸ್, ಮಂಗನ ಕಾಯಿಲೆ, ಮೆದುಳು ಜ್ವರ, ನಾಯಿ ಲಾಡಿಹುಳು ಇತ್ಯಾದಿ. ರೇಬೀಸ್ ರೋಗದ ಬಗ್ಗೆ ಜನಸಾಮಾನ್ಯರಿಗೆ ಅರಿವು ಅಗತ್ಯ. ರೇಬೀಸ್ ರೋಗದಿಂದ ನರಳುತ್ತಿರುವ ಪ್ರಾಣಿ – ಅಂದರೆ ನಮ್ಮ ದೇಶದಲ್ಲಿ ಮುಖ್ಯವಾಗಿ ನಾಯಿ, ಬೆಕ್ಕು ಇವುಗಳು ಕಚ್ಚಿದಾಗ ರೇಬೀಸ್ ರೋಗ ಉಂಟು ಮಾಡುವ ವೈರಸ್ ರೋಗಾಣು ಮನುಷ್ಯನ ದೇಹ ಸೇರುತ್ತವೆ. ನರಕೋಶಗಳಲ್ಲಿ ವೃದ್ಧಿಯಾಗಿ ಮೆದುಳು ತಲುಪಿ, ರೇಬೀಸ್‌ರೋಗ ಉಂಟಾದರೆ ಸಾವು ಖಚಿತ. ರೇಬೀಸ್‌ರೋಗ ಬಂದ ಮೇಲೆ ಗುಣಪಡಿಸಲು ಯಾವುದೇ ಚಿಕಿತ್ಸೆ ಇರುವುದಿಲ್ಲ. ಆದ್ದರಿಂದ ನಾಯಿ ಕಚ್ಚಿದ ಕೂಡಲೆ ಸೋಪು ಹಚ್ಚಿ, ಹೆಚ್ಚು ನೀರನಲ್ಲಿ ತೊಳೆಯಬೇಕು. ಇದರಿಂದ ವೈರಸ್ ರೋಗಾಣು ತಡೆಯಲು ಸಹಾಯವಾಗುತ್ತದೆ. ವೈದ್ಯರ ಸಲಹೆಯಂತೆ ರೇಬೀಸ್ ನಿರೋಧಕ ಮೇದಸ್ಸು ಅಂದರೆ Anti Rabies Serum, ಮತ್ತು ರೇಬೀಸ್ ನಿರೋಧಕ ಲಸಿಕೆ ಪಡೆಯಬೇಕು. ಯಾವುದೇ ಕಾರಣಕ್ಕೂ ಉದಾಸೀನ ಮಾಡಬಾರದು. ರೇಬೀಸ್ ರೋಗ ಬಾರದಂತೆ ತಡೆಗಟ್ಟಲು ಉತ್ತಮ ಲಸಿಕೆ ಲಭ್ಯವಿದೆ.

### *ಪ್ಲೇಗ್‌ರೋಗ*

ಪ್ಲೇಗ್‌ರೋಗ ಸಹ ಒಂದು ಭಯಂಕರ ರೋಗ. ಯರ್ಸಿನಿಯ ಪೆಸ್ಟಿಸ್ ಎನ್ನುವ ಬ್ಯಾಕ್ಟೀರಿಯ ಇದಕ್ಕೆ ಕಾರಣ. ಇದು ಇಲಿಗಳಿಂದ ಮನುಷ್ಯನಿಗೆ ಚಿಗಟ ಎನ್ನುವ ಕೀಟಗಳ ಮೂಲಕ ಹರಡುತ್ತದೆ. ಇಲಿ ಹೆಗ್ಗಣಗಳನ್ನು ಹತೋಟಿಯಲ್ಲಿಡಬೇಕು. ಡಿ.ಡಿ.ಟಿ. ಸಿಂಪಡಣೆಯಿಂದ ಚಿಗಟಗಳನ್ನು ನಾಶ ಮಾಡಬಹುದು.

### *ಮಂಗನ ಕಾಯಿಲೆ*

ಕರ್ನಾಟಕದ ಜನತೆ ಮಂಗನ ಕಾಯಿಲೆಯನ್ನು ಮರೆಯುವಂತಿಲ್ಲ. ಮಂಗನ ಕಾಯಿಲೆಗೆ ಕಾರಣ ಒಂದು ವೈರಸ್. ಮಂಗನಿಂದ ಮನುಷ್ಯನಿಗೆ ಟಿಕ್ ಅಂದರೆ ''ಉಣ್ಣೆ'' ಎನ್ನುವ ಕೀಟದಿಂದ ಹರಡುತ್ತದೆ. ಶಿವಮೊಗ್ಗ ಜಿಲ್ಲೆಯ ಕ್ಯಾಸನೂರು







ಮಂಗನಿಂದ ಮಂಗನ ಕಾಯಿಲೆ

ಅರಣ್ಯದಲ್ಲಿ ಮೊದಲು ಕಂಡುಬಂದದ್ದರಿಂದ ''ಕ್ಯಾಸನೂರು ಅರಣ್ಯ ಕಾಯಿಲೆ'' ಎಂದು ಹೆಸರಿಡಲಾಗಿದೆ. ದನ ಮೇಯಿಸಲು, ಸೌದೆ ತರಲು ಕಾಡಿಗೆ ಹೋಗುವ ಬಡಜನರಲ್ಲಿ ಇದು ಹೆಚ್ಚಾಗಿ ಕಂಡುಬರುತ್ತದೆ. ಉಣ್ಣೆ ಹೆಚ್ಚಾಗಿರುವ ಪ್ರದೇಶಗಳಲ್ಲಿ ಕ್ರಿಮಿನಾಶಕ ಸಿಂಪಡಣೆ, ಉಣ್ಣೆ ಕಚ್ಚದಂತೆ ಬಟ್ಟೆ ತೊಡುವುದು ಈ ಕ್ರಮಗಳನ್ನು ಪಾಲಿಸುತ್ತಾರೆ.

### *ಮೆದುಳು ಜ್ವರ*

ಇದೇ ರೀತಿಯಲ್ಲಿ ಮೆದುಳು ಜ್ವರ ಸಹ ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ಕಾಣಿಸಿಕೊಳ್ಳುತ್ತಾ ಇರುತ್ತದೆ. ಇದು ಸಹ ಒಂದು ವೈರಸ್ ಕಾಯಿಲೆ. ಹಂದಿ ಮರಿಗಳಲ್ಲಿ ವೈರಸ್ ರೋಗಾಣು ವೃದ್ಧಿಯಾಗುತ್ತದೆ. ಆದರೆ ಹಂದಿ ಮರಿಗಳಲ್ಲಿ ರೋಗಚಿಹ್ನೆಗಳು ಕಂಡುಬರುವುದಿಲ್ಲ. ಕ್ಯೂಲೆಕ್ಸ್ ಹೆಣ್ಣು ಸೊಳ್ಳೆ ಹಂದಿ ಮರಿಯನ್ನು ಕಚ್ಚಿ ರಕ್ತ ಹೀರಿ ನಂತರ ಮನುಷ್ಯನನ್ನು ಕಚ್ಚಿ



ಹಂದಿಗಳಿಂದ ಮೆದುಳು ಜ್ವರ

ರಕ್ತ ಹೀರುವಾಗ ವೈರಸ್ ರೋಗಾಣುಗಳು ಹಂದಿಗಳಿಂದ ಮನುಷ್ಯನಿಗೆ ಹರಡುತ್ತದೆ. ಮೆದುಳು ಜ್ವರಕ್ಕೆ ಖಚಿತವಾದ ಚಿಕಿತ್ಸೆ ಇರುವುದಿಲ್ಲ. ಸಾಕಷ್ಟು ಪ್ರಮಾಣದಲ್ಲಿ ರೋಗಬಾರದಂತೆ ತಡೆಗಟ್ಟಲು ಲಸಿಕೆ ಇರುವುದಿಲ್ಲ. ಕ್ಯೂಲೆಕ್ಸ್ ಸೊಳ್ಳೆಯನ್ನು ನಿಯಂತ್ರಿಸುವುದು. ಹಂದಿಗಳನ್ನು ದೂರವಿಡುವುದು ಈ ಕ್ರಮಗಳಿಂದ ಮೆದುಳುಜ್ವರ ನಿಯಂತ್ರಣ ಸಾಧ್ಯವಿದೆ. ನಾಯಿಲಾಡಿಹುಳು ಬಗ್ಗೆ ನಾವು ತಿಳಿಯಬೇಕು. ಅದು ಮೊಟ್ಟೆ ಇಡುತ್ತದೆ. ಮೊಟ್ಟೆಗಳು ನಾಯಿಯ ಮಲದ ಮೂಲಕ ಹೊರ ಬರುತ್ತದೆ. ನಾಯಿಗಳನ್ನು ಮುದ್ದಿಸುವುದು ನಂತರ ಕೈತೊಳೆಯದೆ ಆಹಾರ ಸೇವಿಸುವುದು, ಕಲುಷಿತವಾದ ನೀರು ಕುಡಿಯುವುದು ಇದರಿಂದ ಮನುಷ್ಯನಿಗೆ ನಾಯಿಲಾಡಿಹುಳು ಸೋಂಕು ಉಂಟಾಗುತ್ತದೆ. ಮೊಟ್ಟೆಗಳು ಬೆಳೆದು ಪಿತ್ತಕೋಶ, ಶ್ವಾಸಕೋಶ, ಮೆದುಳು ಮುಂತಾದ ಭಾಗಗಳಲ್ಲಿ ದೊಡ್ಡ ಕೋಶವಾಗಿ ಬೆಳೆದು ತೊಂದರೆ ಉಂಟಾಗಿ ಪ್ರಾಣಕ್ಕೆ ಅಪಾಯ ಸಹ ಉಂಟಾಗಬಹುದು. ಸಾಕುಪ್ರಾಣಿಗಳನ್ನು ಸಾಕುವವರು ನೈರ್ಮಲ್ಯ ಪಾಲಿಸಬೇಕು. ಪ್ರಾಣಿಗಳ ಆರೈಕೆ ನಂತರ ಚೆನ್ನಾಗಿ ಸೋಪು ಹಾಕಿ ಕೈ ತೊಳೆದುಕೊಳ್ಳಬೇಕು. ಕುದಿಸದೆ ಇರುವ ಹಾಲು ಕುಡಿಯಬಾರದು. ಕಲುಷಿತವಾದ ಮಾಂಸ ಸೇವನೆ, ಚೆನ್ನಾಗಿ ಬೇಯಿಸದ ಮಾಂಸ ಸೇವನೆ ಅಪಾಯ. ಆದರಿಂದ ಲಾಡಿ ಹುಳುಗಳು ಬರುವ ಸಾಧ್ಯತೆ ಹೆಚ್ಚು. ಆರೋಗ್ಯದ ಬಗ್ಗೆ, ಪ್ರಾಣಿಗಳಿಂದ ಮನುಷ್ಯನಿಗೆ ಹರಡುವ ರೋಗಗಳ ಬಗ್ಗೆ ತಿಳಿದು ನಮ್ಮ ಆರೋಗ್ಯ ರಕ್ಷಣೆ ಮಾಡಿಕೊಳ್ಳಬೇಕು.

★

## ಜ್ವರ ಮತ್ತು ಕೆಮ್ಮು

ಮಳೆಯಲ್ಲಿ ನೆನೆಯುವುದರಿಂದ ಶೀತ, ನೆಗಡಿ, ಕೆಮ್ಮು, ಜ್ವರ, ತಲೆನೋವು ಉಂಟಾಗುತ್ತದೆ. ನಿವಾರಣೆಗೆ ಮೆಣಸು, ಶುಂಠಿ, ಜೀರಿಗೆಗಳನ್ನು ೧:೨:೩ ಪ್ರಮಾಣದಲ್ಲಿ ಸೇರಿಸಿ ಕಷಾಯ ವನ್ನು ತಯಾರಿಸಿ ಅದಕ್ಕೆ ಬೆಲ್ಲ ಸೇರಿಸಿ ತೆಗೆದುಕೊಂಡರೆ ಕಫ ಮತ್ತು ಶೀತದಿಂದ ಉಂಟಾದ ಜ್ವರ ಕಡಿಮೆಯಾಗುತ್ತದೆ. ಕೆಲವೊಮ್ಮೆ ಅಲರ್ಜಿಯಿಂದಾಗಿಯೂ ಗಂಟಲು ಕೆರೆತ, ಕೆಮ್ಮು ಉಂಟಾಗುತ್ತದೆ. ರಾತ್ರಿಯಲ್ಲಿ ಹೆಚ್ಚಾಗಿ ತೊಂದರೆ ಕೊಡುವ ಇಂಥ ಕೆಮ್ಮನ್ನು ನಿವಾರಿಸಲು ಎರಡು ಮೆಣಸಿನ ಕಾಳನ್ನು ಒಂದೆರಡು ಹರಳು ಉಪ್ಪನ್ನು ಸೇರಿಸಿ ದವಡೆಯಲ್ಲಿ ಇಟ್ಟುಕೊಂಡು ರಸವನ್ನು ನುಂಗುತ್ತಿದ್ದರೆ ಗಂಟಲ ಕೆರೆತ ಕಡಿಮೆಯಾಗಿ ಕೆಮ್ಮು ನಿಲ್ಲುತ್ತದೆ.

# ವೀರಾಪುರದಲ್ಲಿ ಧ್ಯಾನಮಂದಿರ ಮತ್ತು ಪುಸ್ತಕ ಭಂಡಾರದ ಶಿಲಾನ್ಯಾಸ

*ವೀರಾಪುರ-ಜ್ಞಾನಜ್ಯೋತಿ, ಕಾಯಕಯೋಗಿ, ನಡೆದಾಡುವ ಜಂಗಮ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಜನ್ಮ ನೀಡಿದ ಪುಣ್ಯಭೂಮಿ. ಪರಮಪೂಜ್ಯರು ಬಾಲಕನಾಗಿದ್ದಾಗ ಆಡಿ ನಲಿದ, ಓಡಾಡಿದ ಪಾವನ ಸುಕ್ಷೇತ್ರ. ಪರಮಪೂಜ್ಯರು ಎಂದೂ ತಾವು ಹುಟ್ಟೂರಿನ ಮೇಲೆ ಪ್ರೀತಿ ತೋರಿದವರಲ್ಲ. ಅವರಿಗೆ ಎಲ್ಲರೂ, ಎಲ್ಲಾ ಗ್ರಾಮಗಳೂ ಒಂದೇ. ಅವರದು ವಿಶ್ವಕುಟುಂಬ. ಆದರೆ ಅಭಿಮಾನಿಗಳು, ಭಕ್ತರು, ಹಿತೈಷಿಗಳು ಒಂದೆಡೆ ಸೇರಿ ಪೂಜ್ಯರು ಜನಿಸಿದ ಗ್ರಾಮವನ್ನು ಆದರ್ಶ ಗ್ರಾಮವನ್ನಾಗಿ ಮಾಡಬೇಕು, ಕರ್ನಾಟಕ ಭೂಪಟದಲ್ಲಿ ವಿಶಿಷ್ಟ ಸ್ಥಾನವನ್ನು ನೀಡಬೇಕೆಂದು ತೀರ್ಮಾನಿಸಿ ಆ ನಿಟ್ಟಿನಲ್ಲಿ ಕಾರ್ಯೋನ್ಮುಖರಾದರು. ಸರ್ಕಾರವೂ ಅವರ ಪವಿತ್ರ ಭಾವನೆಗಳಿಗೆ ಸ್ಪಂದಿಸಿತು. ವೀರಾಪುರಲ್ಲಿ ಸರ್ವಋತು ರಸ್ತೆ ಅಭಿವೃದ್ಧಿ, ಧ್ಯಾನಮಂದಿರ, ವಾಚಾನಾಲಯ ಇವೇ ಮೊದಲಾದ ಯೋಜನೆಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸಲು ಕಂಕಣ ಬದ್ಧವಾಗಿದೆ. ಪರಮಪೂಜ್ಯರಿಗೆ ಜನ್ಮ ನೀಡಿದ ಈ ಪುಣ್ಯಭೂಮಿ ಒಂದು ಆದರ್ಶ ಗ್ರಾಮವನ್ನಾಗಿ ಮಾಡಬೇಕೆಂಬುವರ ಬಯಕೆ ಪರಮಪೂಜ್ಯರ ಆಶೀರ್ವಾದದಿಂದ ನೆರವೇರುವುದರಲ್ಲಿ ಸಂಶಯವಿಲ್ಲ.*



ವೇದಿಕೆಯಲ್ಲಿ : ಪರಮಪೂಜ್ಯ ಶ್ರೀ ಶ್ರೀಗಳವರು, ವಿವಿಧ ಮಠಗಳ ಹರಗುರು ಚರಮೂರ್ತಿಗಳು ಹಾಗೂ ಅತಿಥಿಗಳು

ಜುಲೈ ೨೩, ವೀರಾಪುರ ಹಾಗೂ ಸುತ್ತಮುತ್ತಲ ಗ್ರಾಮದವರಿಗೆ ಹಬ್ಬದ ವಾತಾವರಣ, ಬೆಂಗಳೂರು ಗ್ರಾಮಾಂತರ, ತುಮಕೂರು, ಮೈಸೂರು, ಮಂಡ್ಯ ಮೊದಲಾದ ಜಿಲ್ಲೆಗಳಿಂದ ಭಕ್ತರು, ಅಭಿಮಾನಿಗಳು ವೀರಾಪುರಕ್ಕೆ ಆಗಮಿಸುತ್ತಿದ್ದ ದೃಶ್ಯ ಕಣ್ಣಿಗೆ ಹಬ್ಬ. ಬಹುದಿನಗಳ ಕನಸು ನನಸಾಗುವ ಶುಭದಿನ. ತ್ರಿವಿಧ ದಾಸೋಹ ಮೂರ್ತಿ, ಕಾಯಕಯೋಗಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆದ ಸಮಾರಂಭವನ್ನು ಆದಿಚುಂಚನಗಿರಿ ಕ್ಷೇತ್ರಾಧ್ಯಕ್ಷರಾದ ಪೂಜ್ಯ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ಉದ್ಘಾಟಿಸಿದರು. ಪೂಜ್ಯ ಶ್ರೀಗಳು ತಮ್ಮ ಉದ್ಘಾಟನಾ ಆಶೀರ್ವಚನದಲ್ಲಿ ''ಸಿದ್ಧಗಂಗಾ







ಜಗದ್ಗುರು ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳವರು ಮತ್ತು ಪರಮಪೂಜ್ಯ ಶ್ರೀ ಶ್ರೀಗಳವರಿಂದ ಜ್ಯೋತಿ ಬೆಳಗಿಸುವುದರ ಮೂಲಕ ಸಮಾರಂಭದ ಉದ್ಘಾಟನೆ



ಮಠ ಕರ್ನಾಟಕದ ಹೆಸರಾಂತ ಮಠ. ಪರಮಪೂಜ್ಯರು ಅಗ್ರಸ್ಥಾನದಲ್ಲಿದ್ದಾರೆ. ವಯೋವೃದ್ಧರು, ಜ್ಞಾನವೃದ್ಧರು, ಯುವ ಸನ್ಯಾಸಿಗಳಿಗೆ, ಮಠಗಳಿಗೆ ಮಾರ್ಗದರ್ಶಕರಾಗಿದ್ದಾರೆ. ದೇಶಕ್ಕೆ ಧರ್ಮ ಬೋಧನೆ ಮಾಡುತ್ತಿದ್ದಾರೆ. ಧರ್ಮಕ್ಕೆ ಅಪಾರ ಸೇವೆ ಸಲ್ಲಿಸುತ್ತಿದ್ದಾರೆ''. ಎಂದು ನುಡಿದ ಶ್ರೀಗಳು ''ಗ್ರಾಮಾಂತರ ಜನತೆ ಹಾಗೂ ಮಕ್ಕಳ ಬಗ್ಗೆ ಉತ್ತಮ ಚಿಂತನೆ, ಕಳಕಳಿ ಹೊಂದಿದ್ದಾರೆ. ನಮಗೆ ಅವರ ಮಾರ್ಗದರ್ಶನ ದೊರೆಯುತ್ತಿರುವುದು ನಮ್ಮ ಸುದೈವ, ಅವರು ಜಗತ್ತಿಗೆ ಬೆಳಕು, ನಮ್ಮ ಭಾಗ್ಯ. ಅವರು ನಡೆದಾಡುವ ಜಾಗದ ಪ್ರತಿಕಣವೂ ಪವಿತ್ರವಾದುದು ಎಂದು'' ನುಡಿದರು.



ಧ್ಯಾನಮಂದಿರದ ಶಿಲಾನ್ಯಾಸ ನೆರವೇರಿಸಿದ ಕರ್ನಾಟಕ ಸರ್ಕಾರದ ಸಕ್ಕರೆ ಮತ್ತು ಪಶುಸಂಗೋಪನಾ ಸಚಿವರಾದ ಶ್ರೀ ಎಂ. ಮಹದೇವ್‌ರವರು ಮಾತನಾಡಿ ''ಉತ್ತರ ಕರ್ನಾಟಕ ಬಸವಣ್ಣನವರಿಂದ ಹೆಸರಾಗಿದ್ದರೆ, ದಕ್ಷಿಣ ಕರ್ನಾಟಕ ಪರಮಪೂಜ್ಯರಿಂದ ಪವಿತ್ರವಾಗಿದೆ. ನಿಜಕ್ಕೂ ನಾವು ಧನ್ಯರು, ಸ್ವಾಮೀಜಿ ೨೧ನೇ ಶತಮಾನದಲ್ಲಿ ೧೨ನೇ ಶತಮಾನದ ಶರಣರ ದಿವ್ಯ ಸಂದೇಶವನ್ನು ಅನುಷ್ಠಾನಗೊಳಿಸುವುದರ ಮೂಲಕ ತೋರಿಸಿಕೊಟ್ಟಿದ್ದಾರೆ. ಜಗತ್ತಿನಲ್ಲಿನ ಅನ್ಯಾಯ, ದ್ವೇಷಗಳನ್ನು ಹೋಗಲಾಡಿಸಲು ಮಠಗಳಿಂದ ಮಾತ್ರ ಸಾಧ್ಯ. ಧರ್ಮ, ಧರ್ಮವಾಗಿರಬೇಕು. ಅದಕ್ಕೆ ರಾಜಕೀಯ ಸೇರಿಸಬಾರದು. ಮಾನವೀಯ ಮೌಲ್ಯಗಳ ಉಳಿವು ಧರ್ಮಗುರುಗಳಿಂದ ಮಾತ್ರ ಸಾಧ್ಯ'' ಎಂದು ನುಡಿದರು.

ಪುಸ್ತಕ ಭಂಡಾರಕ್ಕೆ ಶಿಲಾನ್ಯಾಸ ಮಾಡಿದ ಕರ್ನಾಟಕ ಸರ್ಕಾರದ ಪರಿಸರ ಮತ್ತು ವಾರ್ತಾ ಸಚಿವರಾದ ಶ್ರೀ ಅಲ್ಲಂ ವೀರಭದ್ರಪ್ಪನವರು ''ಶ್ರೀಗಳು ನಾಡಿನ ಸಮಸ್ತ ಜನರಿಗೆ ಮಾರ್ಗದರ್ಶಕರು, ಬಸವಣ್ಣನ ತತ್ವಗಳನ್ನು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಅಳವಡಿಸಿ ಕೊಂಡಿದ್ದಾರೆ. ಮಠಗಳು ಹೇಗಿರ ಬೇಕು ಎಂಬುದಕ್ಕೆ ಶ್ರೀ ಕ್ಷೇತ್ರ ಒಂದು ಜ್ವಲಂತ ನಿದರ್ಶನ. ಶ್ರೀ ಕ್ಷೇತ್ರ ಮಾದರಿ ಪುಣ್ಯಕ್ಷೇತ್ರ. ಸ್ವಾತಂತ್ರ್ಯ ಬಂದು ೫೦ ವರ್ಷಗಳ ನಂತರ ಬಿಸಿಯೂಟದ ಚಿಂತನೆ ಬಂದಿದೆ. ೧೨ನೇ ಶತಮಾನದಲ್ಲಿ ಈ ಯೋಜನೆ ಇತ್ತು. ಕಾಯಕವೇ ಕೈಲಾಸ ಎಂದು ಆ ಕಾಲದ ಜನ ತಿಳಿದಿದ್ದರು. ಶ್ರೀ ಸಿದ್ಧಗಂಗಾ ಕ್ಷೇತ್ರ ಒಳ್ಳೆಯ ಜನರನ್ನು ತಯಾರಿಸುವ ಕೈಗಾರಿಕೆ ಆಗಿದೆ'' ಎಂದು ತಿಳಿಸಿದರು.



ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಸೋಮಶೇಖರ್ ಅವರು ತಮ್ಮ ನುಡಿ ನಮನದಲ್ಲಿ ''ಪರಮಪೂಜ್ಯರು, ತ್ರಿವಿಧ ದಾಸೋಹಿಗಳು ಪರಮ





ಸಮಾರಂಭದಲ್ಲಿ ಕಿಕ್ಕಿರಿದ ಪ್ರೇಕ್ಷಕರು



ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರಿಂದ ಪ್ರಾಸ್ತಾವಿಕ ನುಡಿ

ತಪೋಧನರು, ಶ್ರೀಕ್ಷೇತ್ರ ವಿಶ್ವದ ವಿನೂತನ ಕ್ರಾಂತಿಕಾರಿ ಮಠ. ರಾಷ್ಟ್ರದ ಭೂಪಟದಲ್ಲಿ ಮಹತ್ವದ ಸ್ಥಾನ ಪಡೆದಿದೆ. ಶ್ರೀ ಶ್ರೀಗಳವರು ಸೇವೆಯ ಉತ್ತುಂಗ ಶಿಖರ. ಕಾರುಣ್ಯಮೂರ್ತಿ, ಸಹಸ್ರಾರು ಮಕ್ಕಳಿಗೆ, ಹರಗುರು ಚರಮೂರ್ತಿಗಳಿಗೆ ಚೈತನ್ಯ ನೀಡುತ್ತಿದ್ದಾರೆ. ಧಾರ್ಮಿಕ ಗುರು ಹೇಗಿರಬೇಕು ಎಂಬುದಕ್ಕೆ ಪರಮಪೂಜ್ಯರು ಸಾಕ್ಷೀಭೂತರಾಗಿದ್ದಾರೆ. ಆದರ್ಶಗುರು, ಚೈತನ್ಯಶೀಲ ವ್ಯಕ್ತಿತ್ವ, ಜೀವನದ ಮಹಾಬೆಳಗು'' ಎಂದು ತಿಳಿಸಿದರು.

ಸಭೆಯ ಅಧ್ಯಕ್ಷತೆ ವಹಿಸಿದ್ದ ಕರ್ನಾಟಕ ಸರ್ಕಾರದ ಜವಳಿ ಮತ್ತು ರೇಷ್ಮೆ ಖಾತೆ ಸಚಿವರಾದ ಶ್ರೀ ಹೆಚ್.ಎಂ. ರೇವಣ್ಣನವರು ಮಾತನಾಡಿ ''ಧ್ಯಾನಮಂದಿರ ಮತ್ತು ಪುಸ್ತಕ ಭಂಡಾರದ ಶಿಲಾನ್ಯಾಸಕ್ಕೆ ಶ್ರಮಿಸಿದ ಮಾಗಡಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಗಂಗಾಧರಯ್ಯರವರನ್ನು ಅಭಿನಂದಿಸಿದರು. ಮುಖ್ಯಮಂತ್ರಿಗಳ ವಿಶೇಷ ನಿಧಿಯಿಂದ ೭೫ ಲಕ್ಷ ಮಂಜೂರಾಗಿದೆ. ೧ ಕೋಟಿ ೭೫ ಲಕ್ಷ ನಬಾರ್ಡ್‌ನಿಂದ ಡಾಂಬರೀಕರಣಕ್ಕೆ ಬಿಡುಗಡೆಯಾಗಿದೆ. ಈ ಕ್ಷೇತ್ರದ ಅಭಿವೃದ್ಧಿಗೆ ಎಲ್ಲರ ಸಹಕಾರ ಪಡೆಯೋಣ; ಎಲ್ಲರೂ ಒಟ್ಟಾಗಿ ದುಡಿಯೋಣ'' ಎಂದು ಕರೆ ನೀಡಿದರು.



ಪ್ರಾಸ್ತಾವಿಕ ನುಡಿಗಳನ್ನಾಡಿದ ಕನಕಪುರ ದೇಗುಲಮಠದ ಅಧ್ಯಕ್ಷರಾದ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಆಶೀರ್ವಚನ ನೀಡಿ ಶ್ರೀ ಕ್ಷೇತ್ರದಲ್ಲಿ ೧೦ ಸಾವಿರ ವಿದ್ಯಾರ್ಥಿಗಳಿಗೆ ಅನ್ನದಾನ, ವಿದ್ಯಾದಾನ ನಡೆಯುತ್ತಿದೆ. ಶ್ರೀಗಳು ಪೂಜಾನಿಷ್ಠರು, ದಾಸೋಹ ಮೂರ್ತಿಗಳು ಆಗಿದ್ದಾರೆ'' ಎಂದರು.

ದಿವ್ಯ ನೇತೃತ್ವ ವಹಿಸಿದ್ದ ಶ್ರೀ ಕ್ಷೇತ್ರದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಆಶೀರ್ವಚನ ನೀಡಿ, ''ನಾವು ಮಾಡಬೇಕಾದ ಕಾರ್ಯವನ್ನು ಬಿ.ಇ.ಓ. ಗಂಗಾಧರಯ್ಯನವರು ಮಾಡುತ್ತಿದ್ದಾರೆ. ಮಠದ ಸಂಪರ್ಕ, ಸಹಾಯವಿಲ್ಲ, ತಮ್ಮ ಶಕ್ತಿ ಮೀರಿ ಶ್ರಮಿಸಿದ್ದಾರೆ. ರೇವಣ್ಣನವರು ಬೆನ್ನು ತಟ್ಟಿದ್ದಾರೆ. ಈ ಭೂಮಿಯ ಕಣ ಕಣಕ್ಕೂ ನಮಸ್ಕರಿಸಬೇಕು. ಪರಮಪೂಜ್ಯರ ಕ್ಷೇತ್ರ ಪೂಜ್ಯರಷ್ಟೇ ಪವಿತ್ರ. ನಾವು ಮಾನವರಾಗಿ ಜನ್ಮ ತಾಳಿದ್ದು ಒಂದು ಭಾಗ್ಯ. ಭರತಖಂಡದಲ್ಲಿ ಜನಿಸಿದ್ದು ಮತ್ತೊಂದು ಭಾಗ್ಯ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕಾಲದಲ್ಲಿ ಜೀವಿತರಾಗಿರುವುದು ನಮ್ಮ ಜೀವನದ ಮಗದೊಂದು ಭಾಗ್ಯವಾಗಿದೆ. ಪೂಜ್ಯರಿಗೆ ಯಾವಾಗಲೂ ಮಠದಲ್ಲಿರುವ ಸಹಸ್ರಾರು ಮಕ್ಕಳ ಚಿಂತೆ. ವೀರಾಪುರ ಪ್ರಗತಿಯಾಗಲಿ; ಜನರ ಯಾತ್ರಾ ಕ್ಷೇತ್ರವಾಗಲಿ'' ಎಂದು ನುಡಿದರು.







ಭಕ್ತಾದಿಗಳಿಗೆ ದಾಸೋಹ

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಆಶೀರ್ವಚನ ನೀಡುತ್ತಾ ''ಪ್ರಪಂಚ ಅಲ್ಲೋಲ ಕಲ್ಲೋಲವಾಗಿದೆ, ಅಶಾಂತಿ ತಾಂಡವವಾಡುತ್ತಿದೆ. ಉಗ್ರಗಾಮಿಗಳ ಅಟ್ಟಹಾಸ, ಜಮ್ಮು-ಕಾಶ್ಮೀರದಲ್ಲಿ ಕಲಹದಿಂದ ಅಶಾಂತಿಯ ವಾತಾವರಣ ಉಂಟಾಗಿದೆ. ಶಾಂತಿ ಸ್ಥಾಪನೆಯಾಗದೆ ಮನುಕುಲ ಉದ್ಧಾರವಾಗುವುದಿಲ್ಲ. ಜಗತ್ತಿಗೆ ಇಂದು ಭಾರತೀಯರೇ ದಾರಿ ತೋರಿಸಬೇಕು. ಭಾರತೀಯರು ಜವಾಬ್ದಾರಿ ಸ್ಥಾನದಲ್ಲಿದ್ದಾರೆ.



ಪ್ರಪಂಚದಲ್ಲಿ ಶಾಂತಿ ಸ್ಥಾಪನೆಗೆ ದಾರ್ಶನಿಕರು, ವಿಚಾರವಂತರು ಶ್ರಮಿಸಬೇಕಾಗಿದೆ. ಇಂದು ಕ್ಷಾಮ ಬಂದಿದೆ. ಕುಡಿಯಲು ನೀರಿಲ್ಲ, ದನಕರುಗಳಿಗೆ ಮೇವಿಲ್ಲ. ಕೋಟ್ಯಾಂತರ ಜನರಿಗೆ ಅನ್ನ, ನೀರು, ವಸತಿ ಕೊರತೆ ಇದೆ. ಕೋಟ್ಯಾಂತರ ಹಣ ಯುದ್ಧಕ್ಕೆ ಖರ್ಚಾಗುತ್ತಿದೆ. ಭಾರತ ನಾಗರೀಕತೆಗಳ ಉಗಮಸ್ಥಾನ, ನಾಗರೀಕತೆ ಅರ್ಥಪೂರ್ಣವಾಗಲು ಮೊದಲು ಮನುಷ್ಯ ಮನುಷ್ಯನಾಗಬೇಕು. ಇಂದು ಮಾನವ ತನ್ನಸ್ಥಾನ, ಜವಾಬ್ದಾರಿ, ಕರ್ತವ್ಯ ಅರಿತಿಲ್ಲ, ಮಾನವ ಪ್ರಜ್ಞೆ ನಾಶವಾಗುತ್ತಿದೆ. ದಾನವ ಪ್ರಜ್ಞೆ ಬೆಳೆಯುತ್ತಿದೆ. ಪರಸ್ಪರ ಪ್ರೀತಿ ವಿಶ್ವಾಸವಿಲ್ಲ, ತನ್ನಂತೆ ಇತರರನ್ನು ಕಾಣಬೇಕು ಎನ್ನುವ ಮನೋಭಾವವಿಲ್ಲ, 'ಇವನಾರವ ಇವನಾರವನೆನ್ನದೆ ಇವ ನಮ್ಮವ ಇವ ನಮ್ಮವ ಎನ್ನಬೇಕು. ನಾವು ಮೊದಲು ಮಾನವರಾಗಬೇಕು'' ಎಂದು ನುಡಿದರು.

''ಮಂತ್ರಿಗಳು ತಮ್ಮ ಸ್ಥಾನ ಮರೆತು ಜನಸೇವೆ ಮಾಡಬೇಕು, ಆಗ ಜನರ ಜೀವನ ಹಸನಾಗುತ್ತದೆ. ಲಾಲ್‌ಬಹದ್ದೂರ್ ಶಾಸ್ತ್ರಿಗಳಂತಹ ಪ್ರಧಾನಿಗಳು ಬೇಕು. ಸರ್ಕಾರ ಚಿಟ್‌ಫಂಡ್‌ನ್ನು ನಿಷೇಧಿಸಬೇಕು. ಬ್ಯಾಂಕುಗಳ ಮೂಲಕ ಸರ್ಕಾರ ಸಾಲ ಸೌಲಭ್ಯ ನೀಡಬೇಕು. ಇವೆಲ್ಲವನ್ನು ಸರ್ಕಾರವೇ ಮಾಡಲು ಸಾಧ್ಯವಿಲ್ಲ. ಜನರು ವಿಚಾರವಂತರಾಗಬೇಕು. ಆಡಂಬರ ಜೀವನ ಬಿಟ್ಟು ಸರಳ ಜೀವನ ನಡೆಸಬೇಕು. ಕುಟುಂಬ ಚೆನ್ನಾಗಿರಬೇಕು, ಪ್ರೀತಿ, ವಿಶ್ವಾಸ, ನಿಷ್ಠೆ ಇರಬೇಕು. ಉತ್ತಮ ವಿದ್ಯಾಭ್ಯಾಸ ನೀಡಬೇಕು, ನಿರುದ್ಯೋಗ ಸಮಸ್ಯೆಗೆ ಪರಿಹಾರವೆಂದರೆ ಜನ ಸ್ವಾವಲಂಬಿಯಾಗಬೇಕು. ಒಳ್ಳೆಯ ಕಾರ್ಯಮಾಡುವ ಸಂಕಲ್ಪ ತೊಡಬೇಕು. ಇದಕ್ಕೆ ನಿರಂತರ ಪ್ರಯತ್ನಬೇಕು. ಪರಮಾತ್ಮ ನೀಡಿರುವ ಅವಕಾಶವನ್ನು ಉತ್ತಮವಾಗಿ ಬಳಸಿಕೊಳ್ಳಬೇಕು'' ಎಂದು ನುಡಿದರು.

ಇದೇ ಸಂದರ್ಭದಲ್ಲಿ ಬಿ.ಇ.ಓ. ಶ್ರೀ ಗಂಗಾಧರಯ್ಯ, ಶಿಕ್ಷಕರಾದ ಶ್ರೀ ವಿರೂಪಾಕ್ಷಯ್ಯ, ಶ್ರೀ ಚಂದ್ರಶೇಖರಯ್ಯ, ಶ್ರೀ ಸದಾಶಿವಯ್ಯನವರನ್ನು ಸನ್ಮಾನಿಸಲಾಯಿತು. ನೆಲಮಂಗಲ ಕ್ಷೇತ್ರದ ಶಾಸಕರಾದ ಶ್ರೀ ಅಂಜನಮೂರ್ತಿ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿ ಅಧ್ಯಕ್ಷರಾದ ಶ್ರೀ ಬಿ. ರಾಜಣ್ಣನವರು ಈ ಸಂದರ್ಭದಲ್ಲಿ ಮಾತನಾಡಿದರು.

ಆದರಂಗಿ ಶ್ರೀ ಪರಶಿವಮೂರ್ತಿ ಸ್ವಾಗತಿಸಿದರು. ಶ್ರೀ ಪಿನಾಕಪಾಣಿ ಕಾರ್ಯಕ್ರಮ ನಿರೂಪಿಸಿದರು. ಶ್ರೀ ಗಂಗಾಧರ್ ಪ್ರಾರ್ಥಿಸಿ, ಶ್ರೀ ಶಿವಕುಮಾರ್ ವಂದಿಸಿದರು.

ವರದಿ : ಬಿ.ಆರ್. ರಾಜಶೇಖರ್

## ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಬಸವ ಜಯಂತಿ




ವೇದಿಕೆಯಲ್ಲಿ: ಶ್ರೀ ಎನ್.ಜಿ. ಪ್ರಭುಸ್ವಾಮಿ, ಶ್ರೀಮತಿ ಬಿ. ಜಯಶ್ರೀ, ಶ್ರೀ ಎಲ್. ರೇವಣ್ಣಸಿದ್ಧಯ್ಯ, ಪೂಜ್ಯ ಶ್ರೀ ಶ್ರೀಗಳವರು, ಡಾ. ಎಂ.ಎನ್. ಚನ್ನಬಸಪ್ಪ, ಶ್ರೀ ಎಸ್.ಆರ್. ವಿಜಯಶಂಕರ್ ಹಾಗೂ ಶ್ರೀ ಎಸ್.ಎಸ್. ಶಂಕರಕುಮಾರ್

''ಬಸವಣ್ಣನವರ ತತ್ವ-ಸಂದೇಶಗಳನ್ನನುಸರಿಸಿದರೆ ಈ ದೇಶವು ಹಲವು ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವಾಗುತ್ತದೆ'' ಎಂದು ಸಿದ್ಧಗಂಗಾ ಮಠಾಧೀಶರಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಗಳವರು ಹೇಳಿದರು.

ಪೂಜ್ಯ ಶ್ರೀ ಶ್ರೀಗಳವರು ಆಗಸ್ಟ್ ೨೪ರಂದು ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಬಿರ್ಲಾ ಸಭಾಂಗಣದಲ್ಲಿ ಕಾಲೇಜಿನ ಬೋಧಕೇತರ ನೌಕರರ ಸಂಘದ ವತಿಯಿಂದ ಏರ್ಪಡಿದ್ದ ಶ್ರೀ ಬಸವ ಜಯಂತಿ ಕಾರ್ಯಕ್ರಮವನ್ನು ಉದ್ಘಾಟಿಸಿ ಆಶೀರ್ವಚನ ನೀಡುತ್ತಿದ್ದರು.

''ದೇಶ ಹಲವಾರು ಕ್ಷೇತ್ರಗಳಲ್ಲಿ ಪ್ರಗತಿ ಹೊಂದಿದ್ದರೂ ಸಹ ಇಂದು ಇನ್ನೂ ಅನಕ್ಷರತೆ, ಬಡತನ, ಜಾತಿ ಸಮಸ್ಯೆ ನಿರುದ್ಯೋಗ ದೇಶವನ್ನು ಕಿತ್ತು ತಿನ್ನುತ್ತಿದೆ ಎಂದು ಕಳವಳ ವ್ಯಕ್ತಪಡಿಸಿದ ಶ್ರೀಗಳು ಇವುಗಳ ನಿರ್ಮೂಲನೆ ಮಾಡಲು ಎಲ್ಲರೂ ಬಸವಣ್ಣನವರ ದಿವ್ಯ ಸಂದೇಶವನ್ನು ಜೀವನದಲ್ಲಿ ಅಳವಡಿಸಿಕೊಂಡು ಅದರಂತೆ ನಡೆಯಬೇಕು'' ಎಂದು ಕರೆ ನೀಡಿದರು.

ನಿವೃತ್ತ ಪೊಲೀಸ್ ವರಿಷ್ಠಾಧಿಕಾರಿ ಹಾಗೂ ಅಕ್ಷರ ದಾಸೋಹ ಯೋಜನೆಯ ಸಲಹೆಗಾರರಾದ ಶ್ರೀ ಎಲ್. ರೇವಣ್ಣಸಿದ್ಧಯ್ಯ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಅವರು ತಮ್ಮ ಭಾಷಣದಲ್ಲಿ ಬಸವ ಜಯಂತಿ ಉದ್ದೇಶ-ಮಹತ್ವಗಳು ಪರಿಪೂರ್ಣವಾಗಿ ಜನರಿಗೆ ತಲುಪಬೇಕು ಎಂದು ಹೇಳಿದ ಶ್ರೀಯುತರು ಸದರಿ ಸಂಘ ಇಂತಹ ಕಾರ್ಯಕ್ರಮ ನಡೆಸುತ್ತಿರುವುದು ತುಂಬಾ ಶ್ಲಾಘನೀಯ, ದೀಕ್ಷಾ ಮನೋಭಾವದಿಂದ ಇಂತಹ ಕಾರ್ಯಕ್ರಮಗಳನ್ನು ನಿರಂತರವಾಗಿ ನಡೆಸಿಕೊಂಡು ಹೋಗುವಂತೆ ಸಲಹೆ ಮಾಡಿದರು.







ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ



ತುಮಕೂರಿನ ದೊಡ್ಡಮನೆ ನರ್ಸಿಂಗ್ ಹೋಂನ ಮುಖ್ಯಸ್ಥರಾದ ಡಾ. ಹನುಮಕ್ಕ ಅವರಿಗೆ ಆಶೀರ್ವಾದ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಶಿಕ್ಷಕರಾದ ಶ್ರೀ ಕೆ. ಸಿದ್ಧಲಿಂಗಯ್ಯ ಅವರಿಗೆ ಆಶೀರ್ವಾದ

ಶ್ರಮದಿಂದ ಪ್ರತಿಫಲವನ್ನು ನಿರೀಕ್ಷಿಸುವಂತವರಾಗಬೇಕು. ಒಳ್ಳೆಯ ಸೇವಾ ಮನೋಭಾವವುಳ್ಳವರಾಗಬೇಕು ಎಂದು ಹೇಳಿದ ಶ್ರೀ ಎಲ್. ರೇವಣ್ಣಸಿದ್ಧಯ್ಯ ಅವರು, ಬಸವಣ್ಣನವರ ಸಂದೇಶವನ್ನು ಅಲ್ಪಮಟ್ಟಿಗಾದರೂ ಅನುಸರಿಸಿದ್ದರೆ ಸಮಾಜದಲ್ಲಿನ ಹಲವು ಸಮಸ್ಯೆಗಳು ಬಗೆಹರಿಯುತ್ತಿದ್ದವು ಎಂದರು.

ಖ್ಯಾತ ಹಿನ್ನೆಲೆ ಗಾಯಕಿ ಹಾಗೂ ನಟಿ ಶ್ರೀಮತಿ ಬಿ. ಜಯಶ್ರೀ ಅವರು ಮಾತನಾಡಿ, ಶ್ರೀಗಳನ್ನು ನೋಡುವ ಭಾಗ್ಯ ಇಂದು ದೊರೆತಿದೆ. ನಾನು ನಿಜಕ್ಕೂ ಧನ್ಯೆ. ಇದಕ್ಕೆ ನಾನು ನಿಮ್ಮೆಲ್ಲರಿಗೂ ಚಿರಋಣಿಯಾಗಿರುತ್ತೇನೆ ಎಂದು ಭಾವುಕರಾಗಿ ನುಡಿದರು.

ವಿಮರ್ಶಕ ಶ್ರೀ ಎಸ್.ಆರ್. ವಿಜಯಶಂಕರ್, ಪ್ರಾಂಶುಪಾಲರಾದ ಡಾ. ಎಂ.ಎನ್. ಚನ್ನಬಸಪ್ಪ ಅವರು ಈ ಸಂದರ್ಭದಲ್ಲಿ ಮಾತನಾಡಿದರು.

ಕಾರ್ಯಕ್ರಮದಲ್ಲಿ ವಿವಿಧ ಕ್ಷೇತ್ರದಲ್ಲಿ ಗಣನೀಯ ಸೇವೆಸಲ್ಲಿಸಿದ ಡಾ. ಹನುಮಕ್ಕ, ಶ್ರೀ ಕೆ.ಎಸ್. ಸಿದ್ಧಲಿಂಗಯ್ಯ, ಶ್ರೀ ಜಗದೀಶ್, ಶ್ರೀಮತಿ ಸಾವಿತ್ರಿ ತೊಡಕರ್ ಹಾಗೂ ಶ್ರೀ ಎಸ್.ಎಸ್. ಶಂಕರ್ ಕುಮಾರರವರನ್ನು ಶ್ರೀಗಳು ಶಾಲು ಹೊದಿಸಿ ಫಲತಾಂಬೂಲ ನೀಡಿ ಆಶೀರ್ವದಿಸಿದರು.

ಶ್ರೀ ಎನ್.ಜಿ. ಪ್ರಭುಸ್ವಾಮಿ ಸಂಘದ ವರದಿ ಓದಿದರು. ಸಂಘದ ಅಧ್ಯಕ್ಷ ಶ್ರೀ ಎಸ್.ಎಸ್. ಶಂಕರ್ ಸ್ವಾಗತಿಸಿ, ಶ್ರೀಮತಿ ಪುಷ್ಪಕುಮಾರಸ್ವಾಮಿ ಪ್ರಾರ್ಥಿಸಿ, ಶ್ರೀ ಕೆ.ಜಿ. ರುದ್ರೇಶ್ ವಂದಿಸಿದರು. ಶ್ರೀ ಪಿ.ಆರ್. ಬಸವರಾಜು ಕಾರ್ಯಕ್ರಮ ನಿರೂಪಿಸಿದರು.

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೦೧೦. | ಶ್ರೀ ಜಿ. ವೇಣುಗೋಪಾಲ್<br>ವ್ಯವಸ್ಥಾಪಕ ನಿರ್ದೇಶಕರು,<br>ಶ್ರೀ ಪದ್ಮ ಹರಿ ಚಿಟ್ಸ್ ಪ್ರೈ. ಲಿ.<br>ನಂ. ೩೭೯, ಫ್ಲೋರ್, ಓ.ಟಿ.ಸಿ. ರಸ್ತೆ,<br>ಬೆಂಗಳೂರು – ೫೬೦ ೦೫೩. | ೫,೦೦೧.೦೦ |
| ೧೦೧೧. | ಶ್ರೀಮತಿ ಟಿ.ಎಸ್. ಗಂಗಾಂಬಿಕೆ<br>ಸಹ ಶಿಕ್ಷಕಿ,<br>ಶ್ರೀ ನಿವೇದಿತ ಪ್ರೌಢಶಾಲೆ, ಕ್ಯಾತ್ಸಂದ್ರ,<br>ತುಮಕೂರು ತಾಲ್ಲೂಕು. | ೨,೦೦೦.೦೦ |
| ೧೦೧೨. | ಶ್ರೀಮತಿ ಶಶಿಕಲಾ ಕೋಂ ರೇಣುಕಾರಾಧ್ಯ,<br>'ಶಿವಕೃಪ', ನಂ. ೮೦, ೨ನೇ ಮೈನ್,<br>ಸಿದ್ಧಗಂಗಾ ಬಡಾವಣೆ,<br>ತುಮಕೂರು ನಗರ – ೨. | ೨,೦೦೧.೦೦ |
| ೧೦೧೩. | ಶ್ರೀ ವಿ.ಎಂ. ಪರಮೇಶ್ವರಯ್ಯ<br>ಶ್ರೀ ನಂಜುಂಡೇಶ್ವರ ನಿಲಯ,<br>ನಂ. ೧೨೦, ೩ನೇ ಸ್ಟೇಜ್, ೪ನೇ ಬ್ಲಾಕ್,<br>ಬಸವೇಶ್ವರನಗರ, ಬೆಂಗಳೂರು – ೭೯. | ೧,೦೦೧.೦೦<br>(೨ನೇ ಕಂತು) |
| ೧೦೧೪. | ಶ್ರೀ ಎಸ್.ಎಂ. ಮಲ್ಲೇಶಪ್ಪ<br>ಸಹ ಶಿಕ್ಷಕರು,<br>ಶ್ರೀ ರಾಮೇಶ್ವರ ಕೃಪ, ಶಾಂತಿನಗರ ಬಡಾವಣೆ,<br>೩ನೇ ಮುಖ್ಯರಸ್ತೆ, ೮ನೇ ಕ್ರಾಸ್,<br>ಹಾಸನ – ೫೭೩ ೨೦೧. | ೨,೦೦೧.೦೦ |
| ೧೦೧೫. | ಶ್ರೀಮತಿ ಲಕ್ಷ್ಮೀದೇವಮ್ಮ ಕೋಂ.<br>ಶೆಟ್ಟರಕಪಿನಯ್ಯ ಪಿ.ಎನ್.<br>ಪುಟ್ಟಸಂದ್ರ, ಪಟಗಾನಹಳ್ಳಿ ಅಂಚೆ,<br>ಕೊರಟಗೆರೆ ತಾಲ್ಲೂಕು,<br>ತುಮಕೂರು ಜಿಲ್ಲೆ. | ೧,೦೦೧.೦೦<br>(೧ನೇ ಕಂತು) |
| ೧೦೧೬. | ಶ್ರೀ ಡಿ.ಎಸ್. ಚಂದ್ರಶೇಖರಯ್ಯ<br>ಸಹ ಶಿಕ್ಷಕರು,<br>ಶ್ರೀ ಶಿವಕುಮಾರಸ್ವಾಮಿ ಗ್ರಾ. ಪ್ರೌಢಶಾಲೆ,<br>ಬ್ಯಾಲಕೆರೆ, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೧.೦೦ |
| ೧೦೧೭. | ಶ್ರೀ ಜಿ. ಗುರುಸಿದ್ಧಪ್ಪ<br>ಮುಖ್ಯ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೧೦೧೮. | ಶ್ರೀ ಪಿ.ಹೆಚ್. ನಂಜಯ್ಯ<br>ಹಿಂದಿ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೧೦೧೯. | ಶ್ರೀ ಜಿ.ಕೆ. ನಾಗರಾಜು<br>ಸಹ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೧೦೨೦. | ಶ್ರೀ ವಿರೂಪಾಕ್ಷಯ್ಯ<br>ಹಿಂದಿ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೧೦೨೧. | ಶ್ರೀ ಗುರುದೇವರು<br>ವೃತ್ತಿ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೧೦೨೨. | ಶ್ರೀ ಜಿ. ಪರಮಶಿವಯ್ಯ<br>ಸಹ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| | ಕ್ರ.ಸಂ. ೧೦೧೭ ರಿಂದ ೧೦೨೨ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಕಂಚುಗಲ್ ಬಂಡೇಮಠ, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | |
| ೧೦೨೩. | ಶ್ರೀಮತಿ ಹೆಚ್.ಎಸ್. ಸಿದ್ಧಗಂಗಮ್ಮ<br>ಮುಖ್ಯಸ್ಥರು,<br>ಸೋಸಿಯಾಲಜಿ ವಿಭಾಗ,<br>ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು,<br>ಬಿ.ಹೆಚ್. ರಸ್ತೆ, ತುಮಕೂರು – ೨. | ೨,೦೦೧.೦೦<br>(೨೪ನೇ ಕಂತು) |
| ೧೦೨೪. | ಶ್ರೀ ಸತೀಶ್ ಬಿನ್ ಲಿಂ. ಕೆ.ಬಿ. ಶಿವಬಸಪ್ಪ<br>ಕಾಡಶೆಟ್ಟಿಹಳ್ಳಿ, ಕಡಬಾ ಅಂಚೆ,<br>ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ. | ೨,೦೦೫.೦೦ |
| ೧೦೨೫. | ಶ್ರೀ ಕೆ.ಹೆಚ್. ಪರಮಶಿವಯ್ಯ<br>ಪ್ರಾಂಶುಪಾಲರು,<br>ಸಿದ್ಧಗಂಗಾ ಸಂಜೆ ಕಾಲೇಜು,<br>ಬಿ.ಹೆಚ್. ರಸ್ತೆ, ತುಮಕೂರು – ೨. | ೧,೦೦೦.೦೦<br>(೩ನೇ ಕಂತು) |
| ೧೦೨೬. | ಶ್ರೀ ಕೆ.ಎಲ್. ತಿಪ್ಪೇಸ್ವಾಮಿ<br>ದ್ವಿತೀಯ ದರ್ಜೆ ಸಹಾಯಕರು | ೨,೦೦೧.೦೦ |
| ೧೦೨೭. | ಶ್ರೀ ಎ. ಹನುಮಂತಪ್ಪ<br>ಸಹ ಶಿಕ್ಷಕರು | ೨,೦೦೧.೦೦ |
| ೧೦೨೮. | ಶ್ರೀ ಹೆಚ್.ಜಿ. ತವಣಿ<br>ಸಹ ಶಿಕ್ಷಕರು | ೨,೦೦೧.೦೦ |
| ೧೦೨೯. | ಶ್ರೀಮತಿ ಎಸ್.ಎಂ. ವರದಾಂಬ<br>ಹಿಂದಿ ಶಿಕ್ಷಕರು | ೨,೦೦೧.೦೦ |
| ೧೦೩೦. | ಶ್ರೀ ಹೆಚ್.ಟಿ. ಬೋಗೇಶ್<br>ಸಹ ಶಿಕ್ಷಕರು | ೨,೦೦೧.೦೦ |
| ೧೦೩೧. | ಶ್ರೀ ರಾಮರಾಜ<br>ಪ್ರ.ಶಾ.ಸ. | ೨,೦೦೧.೦೦ |
| | ಕ್ರ.ಸಂ. ೧೦೨೬ ರಿಂದ ೧೦೩೧ರ ವರೆಗಿನ ವಿಳಾಸ<br>ನೆಹರು ಗ್ರಾಮಾಂತರ ಪ್ರೌಢಶಾಲೆ<br>ಆದಿವಾಲ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. | |

*(ಮುಂದುವರಿಯುತ್ತದೆ)*





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೬೧೪. | ಶ್ರೀ ಜಿ.ಕೆ. ರಂಗನಾಥ<br>ಸಹ ಶಿಕ್ಷಕರು | ೧,೦೦೧.೦೦ |
| ೬೧೫. | ಶ್ರೀ ಎಸ್. ಶಿವಣ್ಣ<br>ಸಹ ಶಿಕ್ಷಕರು | ೧,೦೦೧.೦೦ |
| ೬೧೬. | ಶ್ರೀ ಸಿ.ಎಂ. ಮಲ್ಲಿಕಾರ್ಜುನಯ್ಯ<br>ಹಿಂದಿ ಪಂಡಿತರು | ೧,೦೦೧.೦೦ |
| ೬೧೭. | ಶ್ರೀ ಶಿವಲಿಂಗಯ್ಯ<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೬೧೮. | ಶ್ರೀ ಜಿ. ಕೃಷ್ಣಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೬೧೯. | ಶ್ರೀ ವಿ. ಗೋವಿಂದಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೬೨೦. | ಶ್ರೀ ಎನ್. ರಾಮದಾಸಪ್ಪ<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| ೬೨೧. | ಶ್ರೀ ಯೆಂಜಾರಪ್ಪ<br>ಸೇವಕರು | ೧,೦೦೧.೦೦ |
| | ಕ್ರ.ಸಂ. ೬೧೪ ರಿಂದ ೬೨೧ರವರೆಗಿನ ವಿಳಾಸಗಳು<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ತರೂರು, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ. | |
| ೬೨೨. | ಶ್ರೀಮತಿ ಗೌರಮ್ಮ ಜಯಣ್ಣ ದೊಡ್ಡೆರಿ<br>ಕುಲುವನಹಳ್ಳಿ, ನೆಲಮಂಗಲ ತಾ.<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೬೨೩. | ಶ್ರೀ ಟಿ.ಎಂ. ವಾಗೀಶ್ ಚಕ್ರೇಶ್ವರ<br>ಸಹ ಶಿಕ್ಷಕರು | ೧,೦೦೧.೦೦ |
| ೬೨೪. | ಶ್ರೀ ಟಿ.ಬಿ. ಶಂಕರಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೬೨೫. | ಶ್ರೀ ಎಂ.ಎಸ್. ಬಸಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೬೨೬. | ಶ್ರೀ ಬಸವಾಚಾರ್<br>ಸಹ ಶಿಕ್ಷಕರು | ೧,೦೦೧.೦೦ |
| ೬೨೭. | ಶ್ರೀ ಸಿ.ಎನ್. ರಾಜಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೬೨೮. | ಶ್ರೀ ಹೆಚ್.ಬಿ. ಚಂದ್ರಶೇಖರ<br>ಸಹ ಶಿಕ್ಷಕರು | ೧,೦೦೧.೦೦ |
| ೬೨೯. | ಶ್ರೀ ಡಿ. ಶಂಕರಯ್ಯ<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೬೩೦. | ಶ್ರೀ ಸಣ್ಣರಂಗಯ್ಯ<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೬೩೧. | ಶ್ರೀ ಗಂಗಾಧರಯ್ಯ<br>ಪ್ರ.ಶಾ.ಸ. | ೧,೦೦೧.೦೦ |
| ೬೩೨. | ಶ್ರೀ ಕೆಂಪಣ್ಣ<br>ಸೇವಕರು | ೧,೦೦೧.೦೦ |
| ೬೩೩. | ಶ್ರೀ ಹೆಚ್.ಕೆ. ರಂಗಯ್ಯ<br>ಸೇವಕರು | ೧,೦೦೧.೦೦ |
| | ಕ್ರ.ಸಂ. ೬೨೩ ರಿಂದ ೬೩೩ರವರೆಗಿನ ವಿಳಾಸಗಳು<br>ಶ್ರೀ ಗಂಗಾಧರೇಶ್ವರ ಗ್ರಾಮಾಂತರ ಪ್ರೌಢಶಾಲೆ,<br>ಆನೆಕೆರೆ, ತುರುವೇಕೆರೆ ತಾಲ್ಲೂಕು, ತುಮಕೂರು ಜಿಲ್ಲೆ. | |
| ೬೩೪. | ಶ್ರೀ ಟಿ.ಎಲ್. ಚಂದ್ರಶೇಖರಯ್ಯ<br>ದೈಹಿಕ ಶಿಕ್ಷಕರು,<br>ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆ<br>ಶ್ರೀ ಸಿದ್ಧಗಂಗಾಮಠ. | ೧,೦೦೧.೦೦ |
| ೬೩೫. | ಶ್ರೀ ಹನುಮಂತರಾಜು<br>ಸೇವಕರು,<br>ಶ್ರೀ ನಿವೇದಿತಾ ಪ್ರೌಢಶಾಲೆ,<br>ಕ್ಯಾತಸಂದ್ರ, ತುಮಕೂರು. | ೧,೦೦೧.೦೦ |
| ೬೩೬. | ಶ್ರೀ ಎನ್. ಶಿವಕುಮಾರಯ್ಯ<br>ದ್ವಿತೀಯ ದರ್ಜೆ ಸಹಾಯಕರು,<br>ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆ<br>ಶ್ರೀ ಸಿದ್ಧಗಂಗಾ ಮಠ. | ೧,೦೦೧.೦೦ |
| ೬೩೭. | ಶ್ರೀ ಸಿ. ರೇಣುಕಯ್ಯ<br>ಪ್ರಾಂಶುಪಾಲರು,<br>ಶ್ರೀ ಸಿದ್ಧಗಂಗಾ ಪದವಿ ಪೂರ್ವ ಕಾಲೇಜು,<br>ಗುಡೇಮಾರನಹಳ್ಳಿ, ಮಾಗಡಿ ತಾ. | ೧,೦೦೧.೦೦ |
| ೬೩೮. | ಶ್ರೀ ಪ್ರಭು<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಬಿ.ಹೆಚ್. ರಸ್ತೆ, ತುಮಕೂರು. | ೧,೦೦೧.೦೦ |
| ೬೩೯. | ಶ್ರೀ ಕು. ಪುಷ್ಪಲತಾ, ಎಂ.ಎಸ್.<br>ಬಿನ್ ಶಾಂತಮಲ್ಲಪ್ಪ, ಸಹ ಶಿಕ್ಷಕರು,<br>ಸಿದ್ಧಲಿಂಗೇಶ್ವರ ಬಡಾವಣೆ,<br>ಬಸವಾ ಪಟ್ಟಣ, ಅರಕಲಗೂಡು ತಾ.<br>ಹಾಸನ ಜಿಲ್ಲೆ. | ೧,೦೦೧.೦೦ |

*(ಮುಂದುವರಿಯುತ್ತದೆ)*



## ...ಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ
(...ರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೦೨೦. | ಶ್ರೀ ವಿರೂಪಾಕ್ಷಯ್ಯ<br>ಹಿಂದಿ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೧೦೨೧. | ಶ್ರೀ ಗುರುದೇವರು<br>ವೃತ್ತಿ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೧೦೨೨. | ಶ್ರೀ ಜಿ. ಪರಮಶಿವಯ್ಯ<br>ಸಹ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| | ಕ್ರ.ಸಂ. ೧೦೧೭ ರಿಂದ ೧೦೨೨ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಕಂಚುಗಲ್ ಬಂಡೇಮಠ, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | |
| ೧೦೨೩. | ಶ್ರೀಮತಿ ಹೆಚ್.ಎಸ್. ಸಿದ್ಧಗಂಗಮ್ಮ<br>ಮುಖ್ಯಸ್ಥರು,<br>ಸೋಸಿಯಾಲಜಿ ವಿಭಾಗ,<br>ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು,<br>ಬಿ.ಹೆಚ್. ರಸ್ತೆ ತುಮಕೂರು–೨. | ೨,೦೦೧.೦೦<br>(೨೪ನೇ ಕಂತು) |
| ೧೦೨೪. | ಶ್ರೀ ಸತೀಶ್ ಬಿನ್ ಲಿಂ. ಕೆ.ಬಿ. ಶಿವಬಸಪ್ಪ<br>ಕಾಡಶೆಟ್ಟಿಹಳ್ಳಿ, ಕಡಬಾ ಅಂಚೆ,<br>ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ. | ೨,೦೦೩.೦೦ |
| ೧೦೨೫. | ಶ್ರೀ ಕೆ.ಹೆಚ್. ಪರಮಶಿವಯ್ಯ<br>ಪ್ರಾಂಶುಪಾಲರು,<br>ಸಿದ್ಧಗಂಗಾ ಸಂಜೆ ಕಾಲೇಜು,<br>ಬಿ.ಹೆಚ್. ರಸ್ತೆ ತುಮಕೂರು–೨. | ೧,೦೦೦.೦೦<br>(೩ನೇ ಕಂತು) |
| ೧೦೨೬. | ಶ್ರೀ ಕೆ.ಎಲ್. ತಿಪ್ಪೇಸ್ವಾಮಿ<br>ದ್ವಿತೀಯ ದರ್ಜೆ ಸಹಾಯಕರು | ೨,೦೦೧.೦೦ |
| ೧೦೨೭. | ಶ್ರೀ ಎ. ಹನುಮಂತಪ್ಪ<br>ಸಹ ಶಿಕ್ಷಕರು | ೨,೦೦೧.೦೦ |
| ೧೦೨೮. | ಶ್ರೀ ಹೆಚ್.ಜಿ. ತವಣಿ<br>ಸಹ ಶಿಕ್ಷಕರು | ೨,೦೦೧.೦೦ |
| ೧೦೨೯. | ಶ್ರೀಮತಿ ಎಸ್.ಎಂ. ವರದಾಂಬ<br>ಹಿಂದಿ ಶಿಕ್ಷಕರು | ೨,೦೦೧.೦೦ |
| ೧೦೩೦. | ಶ್ರೀ ಹೆಚ್.ಟಿ. ಬೋಗೇಶ್<br>ಸಹ ಶಿಕ್ಷಕರು | ೨,೦೦೧.೦೦ |
| ೧೦೩೧. | ಶ್ರೀ ರಾಮರಾಜ<br>ಪ್ರ.ಶಾ.ಸ. | ೨,೦೦೧.೦೦ |
| | ಕ್ರ.ಸಂ. ೧೦೨೬ ರಿಂದ ೧೦೩೧ರ ವರೆಗಿನ ವಿಳಾಸ<br>ನೆಹರು ಗ್ರಾಮಾಂತರ ಪ್ರೌಢಶಾಲೆ<br>ಆದಿವಾಲ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. | |

*(ಮುಂದುವರಿಯುತ್ತದೆ)*





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ...
## ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣ...
(ಮುಂದು...)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೬೧೪. | ಶ್ರೀ ಜಿ.ಕೆ. ರಂಗನಾಥ<br>ಸಹ ಶಿಕ್ಷಕರು | ೧,೦೦೧.೦೦ |
| ೬೧೫. | ಶ್ರೀ ಎಸ್. ಶಿವಣ್ಣ<br>ಸಹ ಶಿಕ್ಷಕರು | ೧,೦೦೧.೦೦ |
| ೬೧೬. | ಶ್ರೀ ಸಿ.ಎಂ. ಮಲ್ಲಿಕಾರ್ಜುನಯ್ಯ<br>ಹಿಂದಿ ಪಂಡಿತರು | ೧,೦೦೧.೦೦ |
| ೬೧೭. | ಶ್ರೀ ಶಿವಲಿಂಗಯ್ಯ<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೬೧೮. | ಶ್ರೀ ಜಿ. ಕೃಷ್ಣಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೬೧೯. | ಶ್ರೀ ಎ. ಗೋವಿಂದಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೬೨೦. | ಶ್ರೀ ಎನ್. ರಾಮದಾಸಪ್ಪ<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| ೬೨೧. | ಶ್ರೀ ಯೆಂಜಾರಪ್ಪ<br>ಸೇವಕರು | ೧,೦೦೧.೦೦ |
| | ಕ್ರ.ಸಂ. ೬೧೪ ರಿಂದ ೬೨೧ರವರೆಗಿನ ವಿಳಾಸಗಳು<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ತರೂರು, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ. | |
| ೬೨೨. | ಶ್ರೀಮತಿ ಗೌರಮ್ಮ ಜಯಣ್ಣ ದೊಡ್ಡೆರಿ<br>ಕುಲುವನಹಳ್ಳಿ, ನೆಲಮಂಗಲ ತಾ.<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೬೨೩. | ಶ್ರೀ ಟಿ.ಎಂ. ವಾಗೀಶ್ ಚಕ್ರೇಶ್ವರ<br>ಸಹ ಶಿಕ್ಷಕರು | ೧,೦೦೧.೦೦ |
| ೬೨೪. | ಶ್ರೀ ಟಿ.ಬಿ. ಶಂಕರಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೬೨೫. | ಶ್ರೀ ಎಂ.ಎಸ್. ಬಸಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೬೨೬. | ಶ್ರೀ ಬಸವಾಚಾರ್<br>ಸಹ ಶಿಕ್ಷಕರು | ೧,೦೦೧.೦೦ |
| ೬೨೭. | ಶ್ರೀ ಸಿ.ಎನ್. ರಾಜಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೬೨೮. | ಶ್ರೀ ಹೆಚ್.ಬಿ. ಚಂದ್ರಶೇಖರ<br>ಸಹ ಶಿಕ್ಷಕರು | ೧,೦೦೧.೦೦ |
| ೬೨೯. | ಶ್ರೀ ಡಿ. ಶಂಕರಯ್ಯ<br>ದೈಹಿಕ ಶಿಕ್ಷಕರು | ೧,೦೦೧.೦೦ |

**57**ನೇ
ಸ್ವಾತಂತ್ರ್ಯ ದಿನಾಚರಣೆ

# ಭಾರತೀಯನಾಗಿರುವುದೇ ಹೆಮ್ಮೆ
# ಕರ್ನಾಟಕದಲ್ಲಿರುವುದಂತೂ ಮತ್ತಷ್ಟು ಹೆಮ್ಮೆ


ರಾಜ್ಯದ ಜನತೆಗೆ ೫೭ನೇ ಸ್ವಾತಂತ್ರ್ಯ ದಿನಾಚರಣೆಯ ಶುಭಾಶಯಗಳು

ಎಸ್.ಎಂ. ಕೃಷ್ಣ
ಸನ್ಮಾನ್ಯ ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

## ಭಾರತದ ಹೆಮ್ಮೆಯ ರಾಜ್ಯ ಕರ್ನಾಟಕ

೫೬ ವರ್ಷಗಳ ಹಿಂದೆ ನಮ್ಮ ರಾಷ್ಟ್ರ ನಾಯಕರು ಕಂಡ ದೂರದೃಷ್ಟಿ, ಹಾಕಿಕೊಟ್ಟ ಭದ್ರ ಬುನಾದಿ, ಕರ್ನಾಟಕವನ್ನು ಇಂದು ರಾಷ್ಟ್ರದ ಮಾದರಿ ರಾಜ್ಯವನ್ನಾಗಿ ನಿರೂಪಿಸಿದೆ. ಸ್ವಾತಂತ್ರ್ಯೋತ್ಸವದ ಶುಭದಿನವಾದ ಇಂದು ತನ್ನ ಸಾಧನೆಯ ಸಿಂಹಾವಲೋಕನದೊಂದಿಗೆ ಸಾಧಿಸಿದ ಪ್ರಗತಿಯನ್ನು ದಾಖಲಿಸುತ್ತಿದೆ. ಕಳೆದ ಮೂರು ವರ್ಷಗಳಿಂದ ಕರ್ನಾಟಕ ಅನುಭವಿಸಿದ ಬರದ ಪ್ರತಿಕೂಲದ ನಡುವೆಯೂ ಪ್ರಗತಿಗೆ ಬರ ಬಂದಿಲ್ಲ. ಶಿಕ್ಷಣ, ವಸತಿ, ರೈತರ ಹಿತ, ಗ್ರಾಮೋದ್ಧಾರ ಕ್ಷೇತ್ರಗಳಲ್ಲಿ ಕರ್ನಾಟಕ ಇಂದು ಮುಂಚೂಣಿಯಲ್ಲಿದೆ. ೧೯೯೯ ಅಕ್ಟೋಬರ್ ೧೧ರಂದು ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರ ನೇತೃತ್ವದಲ್ಲಿ ಅಧಿಕಾರಕ್ಕೆ ಬಂದ ಇಂದಿನ ಸರ್ಕಾರ ರೈತರು, ದೀನ ದಲಿತರು, ಅಲ್ಪಸಂಖ್ಯಾತರು, ಮಹಿಳೆಯರು ಮತ್ತು ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ರೂಪಿಸಿದ ಹಲವಾರು ಯಶಸ್ವಿ ಕಾರ್ಯಕ್ರಮಗಳು ಇಂದು ಫಲ ನೀಡಿವೆ. ★ *ವಸತಿ* – ರಾಜ್ಯದಲ್ಲಿ ೧೯೪೭ರಿಂದ ೧೯೯೯ರವರೆಗಿನ ೫೨ ವರ್ಷಗಳಲ್ಲಿ ದುರ್ಬಲರಿಗಾಗಿ ಸರ್ಕಾರ ಕಟ್ಟಿಸಿಕೊಟ್ಟ ಮನೆಗಳ ಸಂಖ್ಯೆ ಕೇವಲ ನಾಲ್ಕು ಲಕ್ಷ. ೧೯೯೯ರಿಂದ ೨೦೦೩ರ ನಡುವೆ ನಿರ್ಮಾಣಗೊಂಡ ಮನೆಗಳ ಸಂಖ್ಯೆ ೬.೬೮ ಲಕ್ಷ. ಮುಂದಿನ ಮಾರ್ಚ್ ಒಳಗೆ ಈ ಸಂಖ್ಯೆ ಒಂದು ದಶ ಲಕ್ಷ ತಲುಪಲಿದೆ. ಇದಕ್ಕಾಗಿಯೇ ರೂಪುಗೊಂಡಿರುವ ''ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮ'' ಸಂಖ್ಯೆಯ ಜತೆಗೆ ಗುಣಮಟ್ಟಕ್ಕೂ ಆದ್ಯತೆ ನೀಡಿದೆ. ★ *ಜಲಸಂಪನ್ಮೂಲ* – ನೆನಗುದಿಗೆ ಬಿದ್ದಿದ್ದ ಹಲವಾರು ನೀರಾವರಿ ಯೋಜನೆಗಳಿಗೆ ಕಾಯಕಲ್ಪ ನೀಡಿದ ಈ ಸರ್ಕಾರ, ೬೦೪೮ ಕೋಟಿ ರೂ.ಗಳ ವೆಚ್ಚದಲ್ಲಿ ೬.೬ ಲಕ್ಷ ಎಕರೆ ಭೂಮಿಯನ್ನು ಹೆಚ್ಚುವರಿಯಾಗಿ ನೀರಾವರಿಗೆ ಒಳಪಡಿಸಿದೆ. ಆಲಮಟ್ಟಿ ಮೈದುಂಬಿದ್ದು ಉತ್ತರ ಕರ್ನಾಟಕದ ರೈತರ ಜೀವನ ಮಟ್ಟವನ್ನು ಸುಧಾರಿಸಲಿದೆ. ★ *ಕಾವೇರಿ ನೀರಾವರಿ ನಿಗಮ* – ಕಾವೇರಿ ಕಣಿವೆಯ ನೀರಾವರಿ ಯೋಜನೆಗಳನ್ನು ಪೂರ್ಣಗೊಳಿಸುವುದರ ಜೊತೆಗೆ ಕಾವೇರಿ ನದಿ ನೀರು ಅನಗತ್ಯವಾಗಿ ಪೋಲಾಗದಂತೆ ಸಮರ್ಪಕ ಬಳಕೆಗೆ ನಿಗಮ ಬದ್ಧವಾಗಿದೆ. ★ *ಸ್ತ್ರೀ ಶಕ್ತಿ* – ಸರ್ಕಾರದ ಯೋಜನೆಗಾಗಿ ರೂಪುಗೊಂಡ ಸ್ತ್ರೀ ಶಕ್ತಿ ಇಂದು ಒಂದು ಆಂದೋಲನ, ೧೧ ಲಕ್ಷಕ್ಕೂ ಹೆಚ್ಚಿನ ಮಹಿಳೆಯರನ್ನೊಳಗೊಂಡ ೭೬,೦೦೦ ಮಹಿಳಾ ಸ್ವಸಹಾಯ ಗುಂಪುಗಳು ಸಂಗ್ರಹಿಸಿರುವ ಉಳಿತಾಯದ ಮೊತ್ತ ೧೪೦ ಕೋಟಿ ರೂ.ಗಳಿಗೆ ಹೆಚ್ಚು. ಇನ್ನೂ ೨೫ ಸಾವಿರ ಸ್ತ್ರೀ ಶಕ್ತಿ ಗುಂಪುಗಳನ್ನು ರಚಿಸುವ ಗುರಿ. ★ *ರಸ್ತೆ ಸುಧಾರಣೆ* – ರಸ್ತೆ ಸುಧಾರಣೆಗಾಗಿಯೇ ಅಸ್ತಿತ್ವಕ್ಕೆ ಬಂದ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ೧೦ ಸಾವಿರ ಕಿಲೋಮೀಟರ್‌ಗಳಿಗೂ ಹೆಚ್ಚು ಉದ್ದದ ಜಿಲ್ಲಾ ರಸ್ತೆಗಳನ್ನು ಅಭಿವೃದ್ಧಿಪಡಿಸಿದೆ. ೧೪೭ ಸೇತುವೆಗಳನ್ನು ನಿರ್ಮಿಸಿದೆ. ಗ್ರಾಮೀಣ ರಸ್ತೆ ಸುಧಾರಣೆಗೆ ಮುಂದಿನ ಎರಡು ವರ್ಷಗಳಲ್ಲಿ ೩೦೦ ಕೋಟಿ ರೂ. ವೆಚ್ಚ ಮಾಡಲು ನಿರ್ಧರಿಸಲಾಗಿದೆ. ರಸ್ತೆ ನಿರ್ವಹಣೆಗೆ ಆದ್ಯತೆ ನೀಡಲಾಗಿದೆ. ರಾಜ್ಯದ ೨,೨೯೮ ಕಿಲೋಮೀಟರ್ ಹೆದ್ದಾರಿಗಳ ನಿರ್ವಹಣೆಗೆಂದು 'ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ'ಯನ್ನು ರೂಪಿಸಲಾಗಿದೆ. ★ *ಗ್ರಾಮೀಣ ಸಾರಿಗೆ* – ಸಾರಿಗೆ ವ್ಯವಸ್ಥೆಯಲ್ಲಿ ರಾಷ್ಟ್ರಮಟ್ಟದ ಮನ್ನಣೆ ಪಡೆದಿರುವ ಕರ್ನಾಟಕ, ಇಂದಿನಿಂದ ಹಳ್ಳಿಗಳ ನಡುವೆ ಸಂಚರಿಸುವ ೪೧೦ ಮಿನಿಬಸ್‌ಗಳನ್ನು ರಸ್ತೆಗಿಳಿಸಿದೆ. ★ *ಯಶಸ್ವಿನಿ* – ಸಹಕಾರಿ ಸಂಘದಲ್ಲಿ ಸದಸ್ಯತ್ವ ಹೊಂದಿರುವ ರೈತರಿಗಾಗಿ ರೂಪುಗೊಂಡಿರುವ 'ಯಶಸ್ವಿನಿ' ಯೋಜನೆಯಲ್ಲಿ ಈಗಾಗಲೇ ಸಾವಿರಕ್ಕೂ ಹೆಚ್ಚು ರೈತರು ದುಬಾರಿ ಚಿಕಿತ್ಸೆ ಪಡೆದಿದ್ದಾರೆ. ವಾರ್ಷಿಕ ೬೦ ರೂ. ಪಾವತಿಸುವ ಮೂಲಕ ಸದಸ್ಯರಾಗಬಹುದಾದ ಈ ಯೋಜನೆಗೆ ೧೬ ಲಕ್ಷಕ್ಕೂ ಹೆಚ್ಚು ರೈತರು ನೋಂದಾಯಿಸಿಕೊಂಡಿದ್ದಾರೆ. ★ *ಕುಡಿಯುವ ನೀರು* – ಬರದ ಬವಣೆಯಲ್ಲೂ ಕುಡಿಯುವ ನೀರು ಪೂರೈಕೆಯನ್ನು ಸಮರ್ಪಕವಾಗಿ ನಿರ್ವಹಿಸಿದ ಹೆಗ್ಗಳಿಕೆ ಸರ್ಕಾರದ್ದು. ಬರದ ಯೋಜನೆಗಳಿಗೆ ಮಾಡಲಾದ ವೆಚ್ಚ ೧೩೨ ಕೋಟಿ ರೂ. ಜಲನಿರ್ಮಲ, ಜಲನಿಧಿ, ಸ್ವಜಲಧಾರಾ ಯೋಜನೆಗಳ ಮೂಲಕ ೨೭ ಸಾವಿರ ಜನವಸತಿ ಪ್ರದೇಶಗಳಿಗೆ ಸುರಕ್ಷಿತ ನೀರು ಪೂರೈಸಲಾಗಿದೆ. ಗ್ರಾಮೀಣ ಕುಡಿಯುವ ನೀರು ★ *ಪಾನೀಯ ನಿಗಮ* – ದುಸ್ತರವಾದ ಬರದ ನಡುವೆಯೂ ರಾಜ್ಯದ ಆರ್ಥಿಕ ಸ್ಥಿತಿಯಲ್ಲಿ ಭದ್ರತೆ ಕಾಯ್ದುಕೊಂಡಿರುವ ಕರ್ನಾಟಕ ಮದ್ಯದ ಸೆಕೆಂಡ್ಸ್ ಹಾವಳಿಯನ್ನು ನಿಯಂತ್ರಿಸಲು 'ಪಾನೀಯ ನಿಗಮ'ವನ್ನು ಸ್ಥಾಪಿಸಿದೆ. ಇದೊಂದು ದಿಟ್ಟ ಹೆಜ್ಜೆ. ಸ್ಥಾಪನೆಗೊಂಡ ಎರಡು ತಿಂಗಳಲ್ಲೇ ೧೩೨ ಕೋಟಿ ರೂ. ಹೆಚ್ಚುವರಿ ಆದಾಯ ಸಂಗ್ರಹದ ಮೂಲಕ ನಿಗಮದ ಸ್ಥಾಪನೆಗೆ ಸ್ಪಷ್ಟ ಸಮರ್ಥನೆ ದೊರೆತಿದೆ. ★ *ಸ್ವಚ್ಛಗ್ರಾಮ* – ಉತ್ತಮ ರಸ್ತೆ, ಒಳಚರಂಡಿ, ಸಮುದಾಯ ಗೊಬ್ಬರ ಕೇಂದ್ರ, ಹೊಗೆರಹಿತ ಒಲೆ, ಸಮುದಾಯ ಶೌಚಾಲಯ ಕಲ್ಪಿಸುವ ಸ್ವಚ್ಛಗ್ರಾಮ ಯೋಜನೆಯಲ್ಲಿ ೨೭ ಸಾವಿರಕ್ಕೂ ಹೆಚ್ಚಿನ ಹಳ್ಳಿಗಳಲ್ಲಿ ಜೀವನಮಟ್ಟ ಅಭಿವೃದ್ಧಿಪಡಿಸಲಾಗಿದೆ. ★ *ರೈತ ಕಾಯಕ ಕೆರೆ* – ಹಳ್ಳಿಗಳ ಜೀವನಾಡಿ ಎನಿಸಿರುವ ಕೆರೆಗಳನ್ನು ಪುನಶ್ಚೇತನಗೊಳಿಸುವ ಈ ಯೋಜನೆಯಡಿ ೧೫೦೦ ಕೆರೆಗಳ ಹೂಳೆತ್ತುವ ಕಾಮಗಾರಿ ಚಾಲನೆಯಲ್ಲಿದೆ. ★ *ಅಕ್ಷರ ದಾಸೋಹ* – ವಾರ್ಷಿಕ ರೂ. ೨೦೨ ಕೋಟಿ ವೆಚ್ಚದ ಬೃಹತ್ ಮಧ್ಯಾಹ್ನದ ಬಿಸಿಯೂಟ ಯೋಜನೆಯಿಂದಾಗಿ ಕರ್ನಾಟಕದಾದ್ಯಂತ ೧ರಿಂದ ೫ನೆ ತರಗತಿವರೆಗಿನ ೫೩ ಲಕ್ಷಕ್ಕೂ ಅಧಿಕ ವಿದ್ಯಾರ್ಥಿಗಳಿಗೆ ಪ್ರಯೋಜನವಾಗಿದೆ.

### ಬರ ಪರಿಹಾರ

ಕಳೆದ ಮೂರು ವರ್ಷಗಳ ಅವಧಿಯಲ್ಲಿ ನಿರ್ವಹಿಸಲಾದ ಬರ ಪರಿಹಾರ ಕಾಮಗಾರಿ ಹಲವು ಶಾಶ್ವತ ಯೋಜನೆಗಳನ್ನು ಅನುಷ್ಠಾನಗೊಳಿಸಿದೆ. ಕೇಂದ್ರದ ನೆರವಿನೊಂದಿಗೆ ಗ್ರಾಮೀಣ ಹಂತದಲ್ಲಿ ಲಕ್ಷಾಂತರ ಮಂದಿಗೆ ಉದ್ಯೋಗ ಒದಗಿಸಲಾಗಿದೆ. ಹಲವೆಡೆ ಗೋಶಾಲೆಗಳನ್ನು ನಿರ್ಮಿಸಲಾಗಿದೆ. ಮೇವು ಸಾಗಾಣಿಕೆಗಾಗಿ ೧೩೨ ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

**ಜೈ ಹಿಂದ್**

''ಕರ್ನಾಟಕ ವಾರ್ತೆ''

RNI No. 17139/69 "Siddaganga" Monthly - postal Reg.No. KA/SK/TMR/385/2003-05



ರಾಜ್ಯಸಭಾ ಸದಸ್ಯ ಶ್ರೀ ಎಂ. ರಾಜಶೇಖರಮೂರ್ತಿ ಅವರ ದೆಹಲಿ ನಿವಾಸದಲ್ಲಿ
ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ



ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಬೋಧಕೇತರ ನೌಕರ ಸಂಘ ಏರ್ಪಡಿಸಿದ್ದ ಬಸವ ಜಯಂತಿ ಕಾರ್ಯಕ್ರಮವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸುತ್ತಿರುವುದು. ವೇದಿಕೆಯಲ್ಲಿ: ನಿವೃತ್ತ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಎಲ್. ರೇವಣಸಿದ್ದಯ್ಯ, ಶ್ರೀ ಎಸ್.ಆರ್. ವಿಜಯಶಂಕರ್, ಪ್ರಾಚಾರ್ಯರಾದ ಡಾ. ಎಂ.ಎಸ್. ಚನ್ನಬಸಪ್ಪ ಹಾಗೂ ಬೋಧಕೇತರ ನೌಕರರ ಸಂಘದ ಪದಾಧಿಕಾರಿಗಳು